# ಮಹಾಮನೆ



ಸಂಪುಟ : ೮ ನವೆಂಬರ್ ೨೦೦೫ ಸಂಚಿಕೆ : ೪ ಬೆಲೆ : ರೂ. ೧೫/-

## ಗಂಗಾವತಿಯಲ್ಲಿ ಜಿಲ್ಲಾಮಟ್ಟದ ಪ್ರಥಮ ಯುವಜನ ಸಮಾವೇಶ




ಕೊಪ್ಪಳ ಜಿಲ್ಲಾ ಗಂಗಾವತಿಯಲ್ಲಿ ದಿನಾಂಕ ೯-೧೦-೨೦೦೫ರಂದು ನಡೆದ ಜಿಲ್ಲಾ ಮಟ್ಟದ ಯುವಜನ ಸಮಾವೇಶವನ್ನು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪ ಅವರು ಉದ್ಘಾಟಿಸಿದರು.

(ವರದಿ : ಪುಟ- ೧೭)



## ಮನವಿ

### ಲೇಖಕರಲ್ಲಿ ಬಿನ್ನಹ

- 'ಮಹಾಮನೆ'ಯಲ್ಲಿ ಶರಣ ಸಾಹಿತ್ಯ - ಸಂಸ್ಕೃತಿಗೆ ಸಂಬಂಧಿಸಿದ ಉಪಯುಕ್ತ ಲೇಖನಗಳನ್ನು ಪ್ರಕಟಿಸಲಾಗುತ್ತದೆ.
- ಶರಣ ಕ್ಷೇತ್ರ ಪರಿಚಯ, ಶರಣ ಸಾಹಿತಿಗಳ ಪರಿಚಯ, ಶರಣ ಸಾಹಿತ್ಯ ಕೃತಿಗಳ ಪರಿಚಯದ ಲೇಖನಗಳು 'ಮಹಾಮನೆ'ಯ ಎರಡು ಪುಟಗಳಿಗೆ ಮೀರಬಾರದು.
- ವಿಷಯ ವಿಶ್ಲೇಷಣೆ ಅಥವಾ ವ್ಯಾಖ್ಯಾನ ಸಂಬಂಧ ಲೇಖನಗಳು ಮುದ್ರಿತ ೩-೪ ಪುಟಗಳಿಗೆ ಮೀರಬಾರದು.
- ವಚನ ಸಾಹಿತ್ಯ ಅಥವಾ ಶರಣರ ಜೀವನವನ್ನು ಪ್ರತಿಬಿಂಬಿಸುವ ರೇಖಾ ಚಿತ್ರಗಳಿಗೆ ಅವಕಾಶವುಂಟು.
- ಶರಣ ಕ್ಷೇತ್ರ ಅಥವಾ ಶರಣ ಸಾಹಿತಿಗಳನ್ನು ಕುರಿತ ಲೇಖನಗಳೊಡನೆ ಸಂಬಂಧಪಟ್ಟ ಛಾಯಾಚಿತ್ರಗಳನ್ನು ಕಳುಹಿಸುವುದು ಅಪೇಕ್ಷಣೀಯ.
- ಲೇಖನಗಳನ್ನು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಬೇಕು; ಅಕ್ಷರಗಳು ಸ್ಫುಟವಾಗಿರಬೇಕು.
- ಆಧುನಿಕ ವಚನಕಾರರು ತಮ್ಮ ಹೊಸ ವಚನಗಳನ್ನು ಪ್ರಕಟಣೆಗೆ ಕಳುಹಿಸಬಹುದು.

### ಅನುಭವ ಮಂಟಪ

- ಮಹಾಮನೆಯ ಈ ಅಂಕಣದಲ್ಲಿ ಪ್ರಶ್ನೋತ್ತರಗಳಿಗೆ ಅವಕಾಶ ಕಲ್ಪಿಸಲಾಗಿದೆ. ಇದೊಂದು ಮುಕ್ತ ವಿಚಾರ ವಿನಿಮಯ.
- ಪ್ರಶ್ನೆಗಳು ಗಂಭೀರವಾಗಿರಬೇಕು. ಮುಖ್ಯವಾಗಿ ಶರಣ ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿರಬೇಕು. ಪ್ರಶ್ನೆಗಳು ಸ್ಪಷ್ಟ ಹಾಗೂ ಸಂಕ್ಷಿಪ್ತವಾಗಿರಬೇಕು.
- ವೈಯಕ್ತಿಕ ವಿಷಯಗಳ ಪ್ರಸ್ತಾಪಕ್ಕೆ ಅವಕಾಶವಿಲ್ಲ. ಪ್ರಶ್ನೆಗಳಲ್ಲಿ ಸಾಮೂಹಿಕ ಹಿತದೃಷ್ಟಿಯಿರಬೇಕು.
- ವರ್ಷದ ಕೊನೆಯಲ್ಲಿ ಆಯ್ದ ಪ್ರಶ್ನೋತ್ತರಗಳಿಗೆ ಒಂದು ಸಂಗ್ರಹವನ್ನು ಗ್ರಂಥ ರೂಪದಲ್ಲಿ ತರುವ ವಿಚಾರವಿದೆ.
- ಶರಣ ಸಿದ್ಧಾಂತದ ತಾಂತ್ರಿಕ ಅಂಶಗಳಿಗೆ ಸಂಬಂಧಿಸಿದಂತೆಯೂ ಪ್ರಶ್ನೆಗಳನ್ನು ಕೇಳಬಹುದು.
- ಪ್ರಶ್ನೆಗಳನ್ನು ಒಂದು ಅಂಚೆ ಕಾರ್ಡಿನಲ್ಲಿ ಬರೆದು ಕಳುಹಿಸಿದರೆ ಸಾಕು. ಪ್ರಶ್ನೆ ಕೇಳುವವರು ತಮ್ಮ ಪೂರ್ಣ ಅಂಚೆ ವಿಳಾಸ ತಿಳಿಸಬೇಕು.

## ಗ್ರಂಥ ವಿಮರ್ಶೆ

- 'ಮಹಾಮನೆ'ಯಲ್ಲಿ ಶರಣ ಸಾಹಿತ್ಯ ಮತ್ತು ಸಂಬಂಧಿಸಿದ ಹೊಸ ಪ್ರಕಟಣೆಗಳ ಸಾದರ ಸ್ವೀಕಾರಕ್ಕೆ ಅವಕಾಶವುಂಟು. ಅಂಕಣದ ಪ್ರಕಟಣೆಗೆ ಲೇಖಕರು / ಪ್ರಕಾಶಕರು ತಮ್ಮ ಕೃತಿಗಳ ಒಂದೊಂದು ಪ್ರತಿಯನ್ನು ಕಳುಹಿಸಬೇಕು.
- ವಿಮರ್ಶೆಗಾದರೆ ಪ್ರತಿಯೊಂದು ಕೃತಿಯ ಎರಡೆರಡು ಪ್ರತಿಗಳನ್ನು ಕಳುಹಿಸಬೇಕು. ಅಂತಹ ಕೃತಿಯ ಶೀರ್ಷಿಕಾ ಪುಟದಲ್ಲಿ "ವಿಮರ್ಶೆಯ ಕೃಪೆಗಾಗಿ" ಎಂದು ಬರೆದಿರಬೇಕು.

ವಿ.ಸೂ. ಲೇಖಕರು / ಪ್ರಕಾಶಕರು ಶರಣ ಸಾಹಿತ್ಯ ಪರಿಷತ್ತಿಗೆ ಕಳುಹಿಸುವ ಕೃತಿಗಳನ್ನು ಪರಿಷತ್ತಿನ ಸಾಹಿತ್ಯ ಭಂಡಾರದಲ್ಲಿಟ್ಟು ಓದುಗರಿಗೆ ಆಕರ ಸೌಲಭ್ಯ ಒದಗಿಸಲಾಗುತ್ತದೆ.

ಶರಣ ಸಾಹಿತ್ಯಕ್ಕೆ ಯಾವುದೇ ಕೃತಿಯನ್ನು (ಹಳೆಯದಿರಲಿ, ಹೊಸದಿರಲಿ, ಹಸ್ತಪ್ರತಿಯಿರಲಿ) ಕೊಡುಗೆಯಾಗಿ ಶರಣ ಪರಿಷತ್ತಿನ ಭಂಡಾರಕ್ಕೆ ಕಳುಹಿಸಬಹುದು.

ಸಂಪರ್ಕ ವಿಳಾಸ : ಸಂಪಾದಕರು, 'ಮಹಾಮನೆ', ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ೧ನೆಯ ಮುಖ್ಯರಸ್ತೆ, ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦ ೦೭೦



# ಮಹಾಮನೆ

ಸಂಪುಟ : ೮ ನವೆಂಬರ್ ೨೦೦೫ ಸಂಚಿಕೆ : ೪

*ಅಧ್ಯಕ್ಷರು :*
ಗೊ.ರು. ಚನ್ನಬಸಪ್ಪ
*ಸಂಪಾದಕರು :*
ಎಂ.ಜಿ. ನಾಗರಾಜ್
ಎಚ್.ಎಸ್. ಸಿದ್ಧಗಂಗಪ್ಪ
*ಪ್ರಕಾಶಕರು :*
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು

ಆಡಳಿತ ಮಂಡಳಿ
೧ನೆಯ ಮುಖ್ಯರಸ್ತೆ, ೮ನೆಯ ವಿಭಾಗ
ಶಿವರಾತ್ರೀಶ್ವರ ವೃತ್ತ
ಜಯನಗರ, ಬೆಂಗಳೂರು - ೫೬೦ ೦೭೦
ದೂರವಾಣಿ : ೨೬೫೪ ೯೩೯೪
ಮುದ್ರಕರು :
ಲಕ್ಷ್ಮಿ ಮುದ್ರಣಾಲಯ
೫ನೆಯ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - ೫೬೦ ೦೧೮
ದೂರವಾಣಿ : ೨೬೬೧ ೩೧೨೩

*ಲೇಖಕರ ಅಭಿಪ್ರಾಯಗಳೆಲ್ಲ ಪರಿಷತ್ತಿನ ಅಭಿಪ್ರಾಯಗಳಲ್ಲ*

## ಬಾಗಿಲು ತೆರೆದರೆ......



## 'ಮಹಾಮನೆ'ಯ ಬಾಗಿಲು ತೆರೆದರೆ......

* *ಅಧ್ಯಕ್ಷರ ನುಡಿ, ಸಂಪಾದಕೀಯ ಬರಹಗಳು*
* *ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕೇಂದ್ರ ಚಟುವಟಿಕೆಗಳು*
* *ಶರಣ ಸಾಹಿತ್ಯ ಕೃತಿಗಳು ಮತ್ತು ಶರಣ ಕ್ಷೇತ್ರಗಳ ಪರಿಚಯ*
* *ಶರಣ ಸಾಹಿತ್ಯದಲ್ಲಿ ಕ್ಷೇತ್ರ ದುಡಿದ, ದುಡಿಯುತ್ತಿರುವ ಮಹನೀಯರ ಪರಿಚಯ*
* *ಆಯ್ದ ವಚನಗಳು ಮತ್ತು ಅವುಗಳ ವಿಶ್ಲೇಷಣೆ*
* *ಶರಣ ಸಾಹಿತ್ಯ – ಸಂಸ್ಕೃತಿಗಳಿಗೆ ಸಂಬಂಧಿಸಿದ ಹೊಸ ಶೋಧಗಳು*
* *ಶರಣ ಸಾಹಿತ್ಯ ಕೃತಿಗಳ ಸಾದರ ಸ್ವೀಕಾರ ಮತ್ತು ವಿಮರ್ಶೆ*
* *ಶರಣ ಸಾಹಿತ್ಯ ಕುರಿತ ಪ್ರೌಢ ಲೇಖನಗಳು*
* *ಆಧುನಿಕ ವಚನಕಾರರ ಹೊಸ ವಚನಗಳು*
* *ಓದುಗರೊಡನೆ ಸಂವಾದ – ಪ್ರಶ್ನೋತ್ತರ ವೇದಿಕೆ*
* *ಶರಣ ಸಿದ್ಧಾಂತ – ತಾಂತ್ರಿಕ ಅಂಶಗಳ ವ್ಯಾಖ್ಯಾನ – ಇತ್ಯಾದಿ*



# ವ್ಯಕ್ತಿತ್ವಗಳು

**ಸಹಾಯ ಸ್ವೀಕಾರ–ತಿರಸ್ಕಾರ :**

ಉರಿ ಬರಲಿ, ಸಿರಿ ಬರಲಿ ಎರಡೂ ಸಂದರ್ಭದಲ್ಲಿ, ನೆರವಿಗೆ ಒಡ್ಡಿ ಕೊಳ್ಳುವುದು ಮಾನವೀಯತೆಯೂ ಹೌದು; ಹೊಣೆಯೂ ಹೌದು. ಒಬ್ಬರಿಗೆ ಉರಿ ತಗಲಿತು ಎಂದರೆ, ಅದು ಕಷ್ಟದ ಬರೆ. ಸಿರಿ ಒದಗಿತು ಎಂದರೆ ಸುಖದ ಬಲೆ. ಆದರೆ ಇದು ಸದಾ ಜೊತೆ ಎನ್ನುವಂತಿಲ್ಲ. ಉರಿ ಎಂದಾಗ ನೇವರಿಸುವ ಮನ ಬೇಕು; ಭಾವ ಬೇಕು; ನಂಟು ಅಂಟಬೇಕು. ಅದೇ ಸಿರಿ ಎಂದಾಗ ಗೌರವಿಸುವ ವೈಶಾಲ್ಯ ಬೇಕು; ಮುದವಿಡಬೇಕು; ನಂಟು ಗಂಟಾಗದಂತೆ ನಡೆದುಕೊಳ್ಳಬೇಕು. ಹೀಗೆಲ್ಲ ನೆರವಿನ ಚಾಚು ಇದ್ದಾಗ ಅದನ್ನು ಸ್ವೀಕರಿಸುವ, ತಿರಸ್ಕರಿಸುವ ಬಗೆಯೂ ಇರುತ್ತದೆ.

ಕಷ್ಟಕ್ಕೆ ಆಗುವೆನೆಂದು ಮುಂದೆ ಬಂದು ಪ್ರಚಾರದ ಛಾಯಾಚಿತ್ರದಲ್ಲಿ ಕಂಗೊಳಿಸಿದರೆ ಫಲವೇನು? ಇನ್ನೊಬ್ಬರಿಗೆ ನೆರವಿನ ಹಸ್ತ ಚಾಚಲು ಸಂವೇದನೆ ಏಳಿಸುವ ಪ್ರೇರಣೆ ಆಗಲು ಪ್ರಚಾರ ಇಂದಿನ ಯುಗದ ರೂಢಿ ಎನ್ನುವಂತಾಗಿದೆ ದಿಟ; ಅನೇಕ ಸಂದರ್ಭಗಳಲ್ಲಿ ಅದೇ ಚಾಲು–ಚಾಳಿ ಎನ್ನುವಂತಾಗಿದೆ. ಇಂದು ಮಾಧ್ಯಮ ಹಾಗು ಪಕ್ಷೀಯ ವ್ಯಕ್ತಿಗಳು ನಿರ್ಮಿಸಿರುವ ಪರಿಸರವಿದು. ಆದರೆ ವಿಶಾಲ ವಿಶ್ವದಲ್ಲಿ ಎಲ್ಲ ಕಷ್ಟಗಳ ಸಮಯದಲ್ಲಿ ಇದನ್ನು ಹುಸಿ ಪ್ರಚಾರದ ಚಾಲು ಎನ್ನುವಂತಿಲ್ಲ. ಕಾರಣ ಪ್ರಚಾರಗೊಳ್ಳದಿದ್ದರೆ ವಿಶ್ವದ ಜನತೆಗೆ ತಿಳಿಯುವ ಸಂದರ್ಭವೂ ತಪ್ಪಿಹೋದರೆ ಸಹಾಯ ಸ್ಪಂದನ ಒದಗುವುದಿಲ್ಲ. ಈ ದೃಷ್ಟಿಯಿಂದ ಒಳಿತಿಗೆ ಒಗ್ಗಬೇಕಾದ ಪ್ರಚಾರ, ಸ್ವಾರ್ಥಕ್ಕೆ ಬಗ್ಗಬೇಕಾದುದಂಥದ್ದಲ್ಲ. ಹೀಗೆಯೇ ಸುಖ ಬಂದವನಿಗೆ, ಅದೇ ಗುಂಗಿನಲ್ಲಿ ಉಳಿದಾಗ, ಅವನನ್ನು ಎಚ್ಚರಿಸುವುದೂ ಒಂದು ನೆರವೇ, ಸಾಮಾಜಿಕ ಹೊಣೆಯೇ. ಕಾರಣ ಸುಖವನ್ನು ವಿವೇಚನಾ ರಹಿತವಾಗಿ ಬಳಸುವುದಲ್ಲ.

ಕಾಲ ನಮ್ಮ ಯಾವ ಭವಿಷ್ಯವನ್ನೂ ಉಯ್ಯಾಲೆಗಿಡುವುದುಂಟು. ಆ ಹಂಗಿನಲ್ಲಿ ನಾವಿಲ್ಲ ಎಂದು ತೊಡೆ ತಟ್ಟಿದರೂ, ಭವಿಷ್ಯತ್ತನ್ನು ರೂಪಿಸುವವರು ತಾವೇ ಎಂದು ಹಮ್ಮುಗೊಂಡರೂ, ಕಾಲ ಕಾಯುತ್ತದೆ; ಕಾಯ್ದು ಬುದ್ಧಿಗಲಿಸುತ್ತದೆ. ಅಂತೇ ನಮ್ಮನ್ನು ನಿಷ್ಕ್ರಿಯರನ್ನಾಗಿಸುವುದಿಲ್ಲ. ಸತ್ಕ್ರಿಯೆಯಲ್ಲಿ ತೊಡಗಿಸುತ್ತದೆ, ಹೋರಾಡುವಂತೆ ಮಾಡುತ್ತದೆ. ಹದುಳದ ದಿಸೆಯಲ್ಲಿ ಸಾಗಿದಾಗ ಅನುಗುಣ ಫಲದರ್ಶಿನಿಯೂ ಆಗುತ್ತದೆ. ಇಲ್ಲಿ ನಿಸರ್ಗದ ಸಂಬಂಧವೇ ನಮಗೆ ಕಾಣುವಂತಿದೆ; ನಮ್ಮ ವ್ಯಕ್ತಿತ್ವಗಳ ಪರೀಕ್ಷೆಯೂ ನಡೆಯುತ್ತದೆ. ಖ್ಯಾತಿಲಾಭ ಸಾಧಿಸಿದ ಸೇವೆಗಾದರೆ ಅದು ಸ್ವೀಕಾರಾರ್ಹ; ಸ್ವಾರ್ಥ ಬಳುವಳಿಗಾದರೆ ತಿರಸ್ಕಾರಾರ್ಹ. ಈ ನಿಟ್ಟಿನಲ್ಲಿ ಇತ್ತೀಚೆಗೆ ಸಹಸ್ರ ಸಹಸ್ರ ಜನರನ್ನು ಬಲಿ ತೆಗೆದುಕೊಂಡ ಭೂಕಂಪದ ಸಂದರ್ಭ ನಮ್ಮ ಗಮನಕ್ಕೆ ಬರುತ್ತದೆ.

ಒಂದು ದೇಶದ ಅಂಕೆಯಲ್ಲಿರುವ ಜನಸಂಮರ್ದದ ಭಾಗವು ತೀವ್ರ ಭೂಕಂಪದ ಹಾನಿಗೀಡಾಗಿ, ಗ್ರಾಮ ಗ್ರಾಮಗಳೇ ನಾಶವಾದ ಸಂದರ್ಭ. ಆಗ ನೆರೆಯ ರಾಷ್ಟ್ರವು ಮಾನವೀಯ ನೆಲೆಯಲ್ಲಿ ನೆರವು ಚಾಚಿದರೆ, ಅದಕ್ಕೆ ರಾಜಕೀಯ ಲೇಪನ ಮಾಡಿ, ನೋವುಂಡ ಜನತೆಗೆ ಸಾವಿನ ಅಂಚಿಗಿದ್ದ ಜನತೆಗೆ ನೆರವು ತಪ್ಪಿಸಿದ ರಾಜಕಾರಣ ಮಾನವೀಯ ತುಡಿತದ್ದಲ್ಲ. ತನಗೂ ನೆರವುಗೊಡುವ ಶಕ್ತಿ ಇಲ್ಲದಿದ್ದಾಗ, ನಿರ್ವಹಣೆಯ ಸಾಮರ್ಥ್ಯವಿಲ್ಲದಿದ್ದಾಗ ಪ್ರಾಮಾಣಿಕ ನೆರವಿನ ಬಗ್ಗೆ ಸಂದೇಹಿಸಿ, ನರಳಿದ ಜನತೆಗೆ ಅದನ್ನು ತಪ್ಪಿಸುವುದೆಂದರೆ ಎಂಥ ಅಮಾನವೀಯ ವ್ಯಕ್ತಿತ್ವ! ನೆರವು ಆಮಿಷದ ಸರಕಾದರೆ ಅದು ಸಲ್ಲ; ಬದಲು ಪ್ರಾಮಾಣಿಕವಾಗಿ ಜನತೆಯ ಕಷ್ಟಕ್ಕಾದರೆ ಸಂದೇಹ ಸಲ್ಲ.

**ಡಾ. ಡಿ.ಎಂ. ನಂಜುಂಡಪ್ಪ**

ಸಂದು ಹೋದ ಅಂತರಾಷ್ಟ್ರೀಯ ಆರ್ಥಿಕ ತಜ್ಞ, ಸಂಭಾವಿತ ವ್ಯಕ್ತಿತ್ವದ, ಲಿಂ. ಡಾ. ಡಿ.ಎಂ. ನಂಜುಂಡಪ್ಪ ನಮ್ಮ ನಾಡು ಕಂಡ ಅಪರೂಪದ ಪ್ರತಿಭೆಯ ಪ್ರಭೆ. ದಕ್ಷತೆಯ ನಡುವೆ, ಸಜ್ಜನಿಕೆಯ ಪ್ರತೀಕ. ಒಮ್ಮೆ ಬೆಂಗಳೂರಿನ ಭಾರತೀಯ ವಿದ್ಯಾಭವನದಲ್ಲಿ ಸಭಾಂಗಣದಲ್ಲಿ ರೈತರ ವಿಚಾರ ಸಂಕಿರಣ ನಡೆದಿತ್ತು. ರೈತಾಪಿ ವಿಷಯಗಳನ್ನು ಬಹಳ ಸರಳವಾಗಿ, ಆರ್ಥಿಕ ಸ್ವಾವಲಂಬನೆಯ ಮುನ್ನುಡಿ ಇಟ್ಟು ಅವರು ವಿವರಿಸುತ್ತಿದ್ದರು. ವಿಶ್ವದ ಅಭಿವೃದ್ಧಿಸಿದ್ಧಿ ರಾಷ್ಟ್ರಗಳ ಸಬ್ಸಿಡಿ ಸಂದರ್ಭಗಳ ಸ್ವಾರ್ಥ, ನಮ್ಮ ರೈತರ ಶಕ್ತಿ ಸಾಮರ್ಥ್ಯಕ್ಕೆ, ವ್ಯಕ್ತಿತ್ವಕ್ಕೆ ಹೇಗೆ ಅಣಕದ ಅಡ್ಡಿಗೋಲು ಇಟ್ಟಿದೆ ಎಂದೂ ವಿವರಿಸುತ್ತಿದ್ದರು. ಆಗ ಅವರೆಂದ ಮಾತು *Survival of the fittest*-ಸಮರ್ಥನು ಉಳಿಯುತ್ತಾನೆ, ಅಸಮರ್ಥ ಅಳಿಯುತ್ತಾನೆ ಎನ್ನುವಾಗ, ಈ ಸ್ಪರ್ಧೆ ಸಮಾನ ಅವಕಾಶವಿದ್ದಾಗ ಮಾತ್ರ ಸ್ವೀಕಾರಾರ್ಹ. ಅಸಮಾನ ಅವಕಾಶದ ಸಂದರ್ಭದಲ್ಲಿ ಅಲ್ಲ, ಎಂಬ ಪ್ರತಿಭಾನ್ವಿತ ವಿಶ್ಲೇಷಣೆ ಕೊಟ್ಟರು. ಡಾರ್ವಿನ್ ಹೇಳಿದ ಎಂದು ಅದನ್ನೇ ವೈಜ್ಞಾನಿಕ ಎಂದು ಸದಾ ಕೊರಳಿಗೆ ಪದಕ ಹಾಕಿಕೊಂಡರೆ ಉರುಲಾಗುವ ಸಂದರ್ಭವನ್ನು ನಂಜುಂಡಪ್ಪ ವಿಶ್ಲೇಷಿಸಿದ್ದರು. ನಮ್ಮ ರೈತ ಯಾವ ಐಡೆಂಟಿಟಿಯ ಸಂಘರ್ಷದಲ್ಲೂ (ಅಸ್ತಿತ್ವದ ಆತಂಕ) ಸಿಲುಕದೆ ಅಸಾಮಾನ್ಯ ಸಾಮರ್ಥ್ಯ ತೋರಿರುವಾತ. ಅವನಿಗೆ ಸೂಕ್ತ ಸಬ್ಸಿಡಿಯ ಕೊರತೆಯ ಸಂದರ್ಭ ಹಾಗು ಸಮಾನ ಅವಕಾಶ ವಂಚನೆ ಕುರಿತು ತೋರಿದ ನಂಜುಂಡಪ್ಪನವರ ಮಾನವೀಯ ಪ್ರತಿಕ್ರಿಯೆ, ಸ್ವಾಭಿಮಾನೀ ಕಾಳಜಿ, ಎಂಥ ಪ್ರತಿಭಾ ಪುಂಜದ ಪುಳಕ! ಇದು ನಮ್ಮ ನಂಜುಂಡಪ್ಪನವರ ನಿರ್ಭಿಡೆಯ ಸಜ್ಜನ ವ್ಯಕ್ತಿತ್ವ. ಸಂದುಹೋದ ಇಂಥ ವ್ಯಕ್ತಿತ್ವಕ್ಕೆ ಇಂದೂ 'ಮಹಾಮನೆ'ಯ ಒಂದು ಸ್ಮರಣೆಯ ಅರ್ಪಣೆ.

*ನೆರವು ಬಂದರೂ ಆಮಿಷವೆಂದು ಸಂದೇಹ*
*ನನ್ನ ಒಳಗಿನ ಮತ್ಸರ ಹುಟ್ಟಿಸಿದ ಕೊಳಕು ಗೇಹ*
*ನರಳಿ ನಲುಗಿದ ಜೀವಿಗಳಿಗೆ: ಕೊಡ, ಪಡೆಯಲು ಬಿಡ!*
*ಯಾವ ಹೇಡಿಯ, ಮನಸಿನೊಳಗಣ ಹುಚ್ಚು ಕಿಚ್ಚಿನ ಗೂಢ!*
*ಬೆಳಕಲ್ಲ ಅಚಲದೇವನಾಗೊಡೆಯ*
*ಕೊರಕಲಿನಲಿ ಬಿದ್ದ ಸತ್ತ ಇದ್ದಿಲ ಕೆಂಡ*

*–ಎಂ.ಜಿ. ನಾಗರಾಜ್*
*ಎಚ್.ಎಸ್. ಸಿದ್ದಗಂಗಪ್ಪ*





# ನಾಮಕರಣ



ಕೆಲವು ದಿನಗಳ ಹಿಂದೆ ನನಗೊಂದು ಪತ್ರ ಬಂದಿದೆ. ಪತ್ರ ಬರೆದಿರುವವರು ಚಾಮರಾಜ ನಗರ ಜಿಲ್ಲೆಯ ಗುಂಡ್ಲುಪೇಟೆ ತಾಲೂಕಿನ ಹೊರೆಯಾಲ ಗ್ರಾಮದ ಹಿರಿಯ ಪ್ರಾಥಮಿಕ ಶಾಲೆಯ ಸಹಶಿಕ್ಷಕ ಶ್ರೀ ಶಾಂತಪ್ಪ.

ಪತ್ರದ ಆರಂಭದಲ್ಲಿ 'ಮಹಾಮನೆ'ಯ ಬಗೆಗೆ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

ಇನ್ನು ಅವರ ಪತ್ರದ ಮುಂದಿನ ಭಾಗದಲ್ಲಿರುವ ಸಾಲುಗಳು ಹೀಗಿವೆ: "ನನಗೆ ಈಗ್ಗೆ ಎರಡು ವರ್ಷಗಳ ಹಿಂದೆ ಮದುವೆಯಾಗಿದೆ. ಈಗ ನನಗೊಂದು ಮಗು ಆಗಿದೆ. ಅದು ೧೨.೪.೦೫ರಲ್ಲಿ ಜನಿಸಿದೆ. ಈವಾಗ ನಾನು ೯ ತಿಂಗಳಿಗೆ ಅಂದರೆ ಡಿಸೆಂಬರ್ ೧೧ರಂದು ನಾಮಕರಣ ಶಾಸ್ತ್ರ ಏರ್ಪಡಿಸಬೇಕಾಗಿದೆ. ಈ ಸಂದರ್ಭದಲ್ಲಿ ಸರಳವಾಗಿ ಜನರಿಗೆ ಉಪಯುಕ್ತವಾದ ರೀತಿಯಲ್ಲಿ ಕೆಲವು ವಿಚಾರಗಳನ್ನು ತಿಳಿಸಲು ನೀವು ಏರ್ಪಡಿಸಿರುವ 'ಕದಳಿ ವೇದಿಕೆ' ರೂಪಿಸಬಹುದೇ? ಇದು ಮಾಡಿದರೆ ತಪ್ಪಾಗಬಹುದೇ? ಸುಮಾರು ಅಂದಾಜು ಎಷ್ಟು ಖರ್ಚಾಗುತ್ತೆ? ಹೇಗೆ ಮಾಡಬಹುದು? ಬೇಕೆ? ಬೇಡವೆ? ಎಂಬ ಬಗ್ಗೆ ದಯವಿಟ್ಟು ನನಗೆ ಸ್ವಲ್ಪ ಬಿಡುವು ಮಾಡಿಕೊಂಡು ಪತ್ರಿಸಿ......ಪೂಜ್ಯರು ಅನ್ಯಥಾ ಭಾವಿಸದೆ ಕ್ಷಮಿಸಲು ಕೋರುತ್ತೇನೆ. ಈ ವಿಚಾರವಾಗಿ ಅಂದರೆ ತೊಟ್ಟಿಲು ಶಾಸ್ತ್ರ ಸಂದರ್ಭದಲ್ಲಿ ಸರಳವಾಗಿ ಜನರಿಗೆ ಉಪಯುಕ್ತವಾಗುವ ರೀತಿ ಸಂದೇಶ ಬಿತ್ತರಿಸಲು ಹೇಗೆ ಮಾಡಬಹುದು ಎಂಬ ವಿಚಾರ ಪ್ರಚೋದಕ ಪತ್ರಕ್ಕಾಗಿ ಎದುರು ನೋಡುತ್ತಿದ್ದೇನೆ".

ತುಂಬ ಸ್ವಾರಸ್ಯವಾದ ಪತ್ರ; ಪ್ರಾಮಾಣಿಕ ಪತ್ರ. ನಾನು ಅವರಿಗೆ ಉತ್ತರಿಸಿ, "ನಿಮ್ಮ ಮಗುವಿನ ನಾಮಕರಣ ಸಂದರ್ಭದಲ್ಲಿ ತಾಯಂದಿರಿಗೆ ಸಂಬಂಧಿಸಿದ 'ಕದಳಿ ವೇದಿಕೆ' ಆರಂಭಿಸುವಲ್ಲಿ ತಪ್ಪೇನಿಲ್ಲ. ಅದಕ್ಕೆ ವೆಚ್ಚವನ್ನೇನೂ ಮಾಡಬೇಕಾಗಿಲ್ಲ; ಸಂಘಟಿಸುವ ಇಚ್ಛೆಯಿದ್ದರೆ ಸಾಕು. ಪರಿಷತ್ತು 'ಕದಳಿ ವೇದಿಕೆ'ಯ ಜೊತೆಗೆ ಮಕ್ಕಳಲ್ಲಿ ಶರಣ ಸಂಸ್ಕೃತಿಯನ್ನು ಬೆಳೆಸಲು 'ಎಳೆಯರ ಲೋಕ' ಎಂಬ ವೇದಿಕೆ ರಚಿಸಿದೆ. ನೀವಿರುವ ಗ್ರಾಮದಲ್ಲಿ ನೀವೂ ಅಂತಹ ಮಕ್ಕಳ ವೇದಿಕೆಯನ್ನು ರಚಿಸಬಹುದು" ಎಂದು ತಿಳಿಸಿದೆ.

ಮಕ್ಕಳ ನಾಮಕರಣ ಒಂದು ಶಾಸ್ತ್ರಾಚರಣೆಯಾಗಬಾರದು. ಅದು ಒಂಬತ್ತು ತಿಂಗಳಿಗೇ ಆಗಬೇಕೆಂದೇನೂ ಇಲ್ಲ. ಹುಟ್ಟಿದ ಮಗುವಿಗೆ 'ತೊಟ್ಟಿಲು ಶಾಸ್ತ್ರ'ವೆಂಬುದೇನೂ ಇಲ್ಲ. ಆದರೆ ನಮ್ಮ ಕಕ್ಕುಲತೆಗಾಗಿ ಇವೆಲ್ಲ ನಡೆಯುತ್ತವೆ.

ತೊಟ್ಟಿಲ ಕೂಸಿಗೆ ನಾಮಕರಣ ಮಾಡುವುದು ಲೋಕ ವ್ಯವಹಾರಕ್ಕಾಗಿ; ಹೊರಗಿನವರ ಗುರುತಿಗಾಗಿ. ಮನೆಯವರ ದೃಷ್ಟಿಯಲ್ಲಿ ಅದು 'ಮಗು' ಎಂಬ ನಾಮಕರಣವನ್ನು ಹುಟ್ಟುವ ಮುನ್ನವೇ ಪಡೆದುಕೊಂಡಿರುತ್ತದೆ. ಆ ಮಗು ಮುಂದೆ ದೊಡ್ಡದಾಗಿ ಬೆಳೆದರೂ ಹೆತ್ತವರಿಗೆ 'ಮಗು'ವೇ! ಹುಟ್ಟಿದ ಮಗುವನ್ನು ತೊಟ್ಟಿಲಲ್ಲಿಟ್ಟು ತೂಗುವ ಹೆತ್ತ ತಾಯಿಗೆ ಆ ಮಗುವಿನ ಹೆಸರು ಮುಖ್ಯವಾಗುವುದಿಲ್ಲ. "ಆಚಾರಕ್ಕೆ ಅರಸಾಗು, ನೀತಿಗೆ ಪ್ರಭುವಾಗು, ಮಾತಿನಲಿ ಚೂಡಾಮಣಿ ಆಗು–ನನ ಕಂದ–ಜ್ಯೋತಿಯೆ ಆಗು ಜಗಕೆಲ್ಲ" ಎಂದು ಜೋಗುಳ ಹಾಡಿ ಹಾರೈಸುತ್ತಾಳೆ. ನಾವು ಇಡುವ ಹೆಸರಲ್ಲ; ತನ್ನ ಮಗುವೇ ಹೆಸರು ಮಾಡಬೇಕೆಂದು ಆಕೆಯ ಹಂಬಲ.

ಹುಟ್ಟುವ ಮಕ್ಕಳಿಗೆ ಹೆಸರಿಸುವುದು ಲೋಕ ರೂಢಿ. ಆ ಮಗು ಮುಂದೆ ಹೆತ್ತವರಿಗೆ ಹೆಸರು ತರುವಂತೆ ಬೆಳೆಸುವುದು ಮುಖ್ಯ. ಇದು ಶಿಕ್ಷಕರಾದ ಶಾಂತಪ್ಪನವರಿಗೆ ತಿಳಿಯದ ವಿಷಯವಲ್ಲ. ಆದರೆ ಅವರಿಗಿರುವ ಮುಖ್ಯ ಗಮನ, ಆ ನಾಮಕರಣದ ಸಂದರ್ಭವನ್ನು ಕೇವಲ ಶಾಸ್ತ್ರಾಚರಣೆಯನ್ನಾಗಿಸದೆ ಅದೊಂದು ಉಪಯುಕ್ತ ಸೇವಾ ಸಂದರ್ಭವನ್ನಾಗಿಸುವುದು ಎಂದು ನಾನು ಭಾವಿಸಿದ್ದೇನೆ.

ನಾನು ಅವರಿಗೆ ಬರೆದಿರುವ ಉತ್ತರ ಪತ್ರದಲ್ಲಿ, "ನಾವು ಆಚರಿಸುವ ಮದುವೆ, ನಾಮಕರಣ, ಗೃಹಪ್ರವೇಶ, ಗಣಾರಾಧನೆ,– ಇಂತಹ ಆಚರಣೆಗಳ ಸಂದರ್ಭವನ್ನು ಸದ್ವಿಚಾರ ಚಿಂತನೆಗೆ, ಸಮುದಾಯ ಸೇವೆಗೆ ಅಂಕಿತಗೊಳಿಸುವುದು ಅರ್ಥಪೂರ್ಣ ವಾಗುತ್ತದೆ. ಅಂತೇ ನೀವು ಕದಳಿ ವೇದಿಕೆ ಆರಂಭಿಸುವ ಚಿಂತನೆ ಮಾಡಿರುವುದು ಯೋಗ್ಯವಾಗಿದೆ" ಎಂದು ತಿಳಿಸಿದ್ದೇನೆ.

ಇಂತಹ ಆಚರಣೆಗಳ ಸಂದರ್ಭದಲ್ಲಿ ಹೇಗೂ ಹತ್ತಿರದ ಬಂಧು–ಬಳಗ, ಸುತ್ತಮುತ್ತಿನ ಸ್ನೇಹ ಬಳಗ ಸೇರುತ್ತದೆ. ಸಹಜವಾದ ಸಡಗರ–ಸಂಭ್ರಮಗಳಿರಲಿ. ಜೊತೆಗೆ ಆ ಸಂದರ್ಭದ ನೆನಪು ಉಳಿಯುವಂತಹ ರಚನಾತ್ಮಕ ಕಾರ್ಯಗಳೂ ನಡೆಯುವಂತಾದರೆ ಆ ಸಡಗರ–ಸಂಭ್ರಮಗಳಿಗೆ ಮತ್ತಷ್ಟು ಮೆರಗು ಬಂದೀತು.

ಇತ್ತೀಚೆಗೆ ಇಂತಹ ಗೃಹಾಚರಣೆಗಳೂ ಸಹ ಸರಳತೆಗಿಂತ ವೈಭವಕ್ಕೆ, ಸಹಜಕ್ಕಿಂತ ಪ್ರತಿಷ್ಠೆಗೆ ಒಳಗಾಗಿರುವುದನ್ನು, ವೆಚ್ಚದ ಹೊಳೆಯನ್ನೇ ಹರಿಸುತ್ತಿರುವುದನ್ನು ಕಾಣುತ್ತೇವೆ. ಅಂತಹ ದುಂದು ವೆಚ್ಚಕ್ಕೆ ಬದಲಾಗಿ ಸಮಾಜಕ್ಕೆ ಉಪಯುಕ್ತವಾದ ಸೇವೆಗೆ ಆ 'ಹೆಚ್ಚಿನ ವೆಚ್ಚ'ವನ್ನು ಬಳಸುವಂತಾದರೆ ಲೇಸಲ್ಲವೆ?

ಅಂತೂ ಶಾಂತಪ್ಪ ಮಾಸ್ತರರ ಮಗುವಿನ ನಾಮಕರಣದ ಸಂಗತಿ ನಮ್ಮನ್ನೆಲ್ಲ ಸದ್ವಿಚಾರ ಚಿಂತನೆಗೂ ಪ್ರೇರಣೆ ನೀಡಿದೆ. ಅವರ ಮಗು ಹೆಣ್ಣೋ ಗಂಡೋ ತಿಳಿಸಿಲ್ಲ. ಶರಣ ಸಂಸ್ಕೃತಿಯಲ್ಲಿ ಹೆಣ್ಣು ಗಂಡುಗಳ ಭೇದವಿಲ್ಲದಿದ್ದರೂ ಲೋಕ ರೂಢಿಗಾಗಿ ಹೆಸರಿಡಬೇಕಲ್ಲ. ಶಾಂತಪ್ಪ ದಂಪತಿಗಳು ತಮ್ಮ ಮಗುವಿಗೆ ತಮಗೆ ಇಷ್ಟವೆನಿಸುವ ಶರಣ ಸಂಸ್ಕೃತಿಯ ಹೆಸರನ್ನಿಡಲಿ. ಅದೇ ಸಂದರ್ಭದಲ್ಲಿ ತಮ್ಮ ಮನೆಯಂಗಳದಲ್ಲಿ ನಾಲ್ಕು ಹಸಿರು ಗಿಡ ನೆಡಲಿ!

ಹೊರೆಯಾಲ ಗ್ರಾಮದಲ್ಲಿ 'ಕದಳಿ ವೇದಿಕೆ'–'ಎಳೆಯರ ಲೋಕ' ರಚನೆಯಾಗಲಿ!

–ಗೊ.ರು. ಚನ್ನಬಸಪ್ಪ

## MAN THE FINDER

Ever he is in search
into the nature;

This brainy bee
Goes on buzzing
from flower to flower
for the nector of knowledge.

Goaded with inquisition
He looks into the cosmic-furnace
swims through the crust
down to the homo!

Feels the pulses of rays,
Rides the atomic waves,
measures the mass of matter,
To the edges of space scattered.

He sails into the sea of cells
To feel therein
the touch of life.

What is within?
What fills this all?

In search
He slipped
into the depth of heart

Life beatings,
Mind feelings,
Thought-flowings.

He crossed them;
Facing infinite nothing
He lost his own being!
And in this loss, he
found himself!

-Shri Siddeshwar Swamiji
Gnyana Yogashrama
Bijapur

## ಅನ್ವೇಷಕ ಮಾನವ

ಅನ್ವೇಷಿಸುತಲಿರುವನೀತ ನಿರಂತರ,
ನಿಸರ್ಗದಂತರಾಳದಲಿ;
ಬುದ್ಧಿವಂತ ಭೃಂಗವಿದು,
ಭ್ರಮಣಗೈಯ್ಯುತಲಿದೆ,
ಪುಷ್ಪದಿಂ ಪುಷ್ಪಕೆ,
ಜ್ಞಾನದಮೃತವನರಸಿ.

ಅರಿವಿನ ದಾಹದೊತ್ತಡದಲಿ,
ವಿಶ್ವದ–ಅಗ್ನಿಕುಂಡಗಳಲಿ,
ಮೇಲ್ಪದರುಗಳಲೀಜುತ್ತ,
ಗರ್ಭದಾಳದೊಳಗೆ, ಈಕ್ಷಿಸುತಲಿಹನು.

ಕಿರಣಗಳನಾಡಿಯ ಸ್ಪರ್ಶಿಸಿ,
ಪರಮಾಣುಗಳ ಅಲೆಗಳನೇರುತಿಹನು;
ದ್ರವ್ಯದ, ಬಯಲಿನಂತ್ಯಗಳವರೆಗೆ ಹರಡಿದ,
ದ್ರವ್ಯರಾಶಿಯ ಅಳೆಯುತಲಿಹನೀತ

ಕೋಶಗಳ ಸಾಗರದಿ, ತೇಲುತ ಸಾಗಿಹನು
ಜೀವಸ್ಪರ್ಶದ,
ಅರಿವನು ಪಡೆಯುವುದಕಲ್ಲಿ.

ಒಳಗಿರುವದೇನು?
ಅದನೆಲ್ಲ ತುಂಬಿರುವುದಾವುದು?

ಹುಡುಕಲೋಸುಗ,
ಹೃದಯದಾಳದಲಿ ಇಳಿವನಿವನು.

ಜೀವದ ಬಡಿತಗಳನು,
ಮನದ ಅನಿಸಿಕೆಗಳನು,
ವಿಚಾರದ ಪ್ರವಾಹಗಳನು,

ದಾಟಿದನೀತ;
ಅನಂತ ಶೂನ್ಯವೆದುರಾದಾಗ,
ಸ್ವಂತದಸ್ತಿತ್ವವನೇ ಮರೆತನೀತ!
ಈ ಹಾನಿಯೊಳಗೇ,
ಕಂಡುಕೊಂಡನು ತನ್ನ ತಾನನ್ನೇ!

ಅನುವಾದ : ಡಾ. ವ್ಹಿ.ವ್ಹಿ. ಬಾಗಲಕೋಟೆ
'ವಿಶ್ವಚೇತನ', ಗೋಕಾಕ





# ಬದುಕಿನ ಇನ್ನೊಂದು ಬದಿಯೇ ಮರಣ

–ಪ್ರೊ. ಬಿ.ಜಿ. ಅಮ್ಮಣಗಿ
೩೫೨, ೨ನೇ ಮೈನ್, ೩ನೇ ಅಡ್ಡರಸ್ತೆ, ನಾರಾಯಣಪುರ, ಧಾರವಾಡ

*ನಾಳೆ ಬಪ್ಪುದು ನಮಗಿಂದೆ ಬರಲಿ;*
*ಇಂದು ಬಪ್ಪುದು ನಮಗೀಗಲೆ ಬರಲಿ;*
*ಇದಕಾರಂಜುವರು, ಇದಕಾರಳುಕುವರು?*
*"ಜಾತ್ಯಸ್ಯ ಮರಣಂ ಧ್ರುವಂ" ಎಂದುದಾಗಿ"*
*ನಮ್ಮ ಕೂಡಲಸಂಗಮದೇವರು ಬರೆದ ಬರಹವ ತಪ್ಪಿಸುವಡೆ*
*ಹರಿಬ್ರಹ್ಮಾದಿಗಳಿಗಳವಲ್ಲ!*

ಮನುಷ್ಯನ ಜೀವನ ಸದಾ ಸರಳ ರೇಖೆಯಲ್ಲಿ ಸಾಗುವದಿಲ್ಲ. ಒಳಿತು ಕೆಡಕುಗಳ ಏರಿಳಿತ ಇದ್ದೇ ಇರುತ್ತದೆ. ಸಂಭವಿಸಲಿರುವ ಘಟನೆಗಳು ನಮಗೆ ಸೂಚನೆ ಕೊಟ್ಟು, ಹೇಳಿ ಕೇಳಿ ಬರುವದಿಲ್ಲ. ಕಾರಣ ಇಂತಹವುಗಳಿಗೆ ಆಕಸ್ಮಿಕಗಳು ಎನ್ನುತ್ತೇವೆ. ತಾವಾಗಿಯೇ ಬರುವ ಸಮಸ್ಯೆಗಳಿಗೆ, ಕಷ್ಟನಷ್ಟಗಳಿಗೆ ಹೆದರದೆ ಎದುರಿಸುವುದೇ ಮನುಷ್ಯನ ಅನಿವಾರ್ಯತೆ. ಯಾವ ವ್ಯಕ್ತಿಯೂ ದುಃಖ ದುಮ್ಮಾನಗಳನ್ನು ಬಯಸುವುದಿಲ್ಲ, ನಿರೀಕ್ಷಿಸುವುದೂ ಇಲ್ಲ. ಅಕಸ್ಮಾತ್ ಬಂದಾಗ ಖಿನ್ನ ಮನಸ್ಸಿನಿಂದ ಎದುರಿಸುತ್ತಾನೆ. ಆದರೂ ಇದು ತನ್ನ ಹಣೆ ಬರಹವೆಂದು ಹೇಳಿಕೊಳ್ಳುತ್ತಾನೆ. ಇದು ತನ್ನ ಪೂರ್ವ ಜನ್ಮದ ಕರ್ಮದ ಫಲವೆಂದು ಅಂದುಕೊಂಡು ತನ್ನ ಮನಸ್ಸಿಗೆ ಸಮಾಧಾನ ಹೇಳುತ್ತಾನೆ. ತನ್ನ ಯಾವುದೋ ತಪ್ಪಿಗೆ ದೇವರು ಕೊಟ್ಟ ಶಿಕ್ಷೆಯೆಂದು ಸಹಿಸಿ ಕೊಳ್ಳುತ್ತಾನೆ. ಇಲ್ಲಿ ಕರ್ಮವೆಂದರೆ ಸುಖ–ದುಃಖಗಳಿಗೆ ಕಾರಣವಾದ ಹಿಂದಿನ ಜನ್ಮದ ಕೃತ್ಯ ಅಥವಾ ಪಾಪ. ಅದು ಒಳ್ಳೆಯದಾಗಿದ್ದರೆ ಭಾಗ್ಯವೆಂದೂ, ಕೆಟ್ಟದಾಗಿದ್ದರೆ ದುರ್ಭಾಗ್ಯವೆಂದು ಅಂದುಕೊಳ್ಳುತ್ತಾನೆ ಮನುಷ್ಯ. ಇದೇ ದೇವರು ಬರೆದ ವಿಧಿ ಲಿಖಿತ, ಹಣೆಬರಹ. ಬಹುಶಃ ಬಸವಣ್ಣನವರಿಗೆ ತಮ್ಮ ಸಾವಿನ ಸುಳಿವು ಸಿಕ್ಕಿರ್ತೇನೋ!

ಪ್ರಸ್ತುತ ವಚನ ಮೇಲ್ನೋಟಕ್ಕೆ ವಿಧಿವಾದ ಮತ್ತು ಕರ್ಮಸಿದ್ಧಾಂತವನ್ನು ಪ್ರತಿಪಾದಿಸುತ್ತದೆಂದು ಅನಿಸುತ್ತದೆ. ಇದು ಅರ್ಧ ಸತ್ಯ. ಆದರೆ ಆಶಯ ಭಿನ್ನವೇ ಇದೆ. ಇದು ಮುಂದೆ ಸ್ಪಷ್ಟವಾಗುತ್ತದೆ. ಭಾರತೀಯ ಧಾರ್ಮಿಕ ಪರಂಪರೆಯಲ್ಲಿ ಕರ್ಮವನ್ನು ಒಪ್ಪಿ, ಪೋಷಿಸಿಕೊಂಡು ಬಂದಿದ್ದೇವೆ. ಆದ್ದರಿಂದಲೇ "ಹರೇಣಾಪಿ ಹಿರಣ್ಯಾಪಿ ಲಲಾಟೆ ಲಿಖಿತಾ ರೇಖಾ ಪರಮಾಷ್ಟಂ ನಶಕ್ಯತೆ" ಎಂಬ ನಿರ್ಣಯವನ್ನು ಕೊಟ್ಟುಬಿಡಲಾಗಿದೆ. ನಮ್ಮ ಹುಟ್ಟಿನೊಂದಿಗೆ ಕರ್ಮಗಳನ್ನು ಕಟ್ಟಿಕೊಂಡೇ ಬಂದಿದ್ದೇವೆ ಎಂಬುದು ಹಲವು ಧರ್ಮಗಳ ನಂಬಿಕೆ. ಇಸ್ಲಾಂ ಧರ್ಮದ ಪವಿತ್ರ ಕುರಾನ, "ಮನುಷ್ಯ ತನ್ನ ಕುತ್ತಿಗೆಗೆ ಕರ್ಮವನ್ನು ಕಟ್ಟಿಕೊಂಡು ಬಂದಿದ್ದಾನೆಂದು" ಹೇಳುತ್ತದೆ. ಆದರೆ ಜೈನ ಧರ್ಮದಂತೆ ಇಸ್ಲಾಂ ಆಗಲಿ, ಲಿಂಗಾಯತ ಧರ್ಮವಾಗಲಿ ಕರ್ಮ ಮತ್ತು ಪುನರ್‌ಜನ್ಮವನ್ನು ಒಂದು ಸಿದ್ಧಾಂತವಾಗಿ ಪ್ರತಿಪಾದಿಸುವುದಿಲ್ಲ. ಏನೇ ಆದರೂ ಮನುಷ್ಯ ಕರ್ಮದ, ದೈವೀಶಕ್ತಿಯ ಕೈಯಲ್ಲಿ ಅಸಹಾಯಕ. ಬಾರದೆ ಇದ್ದುದು ಅಂದರೆ ಬರಲಾರದ್ದು, ಬಯಸದೇ ಇದ್ದುದು ಕರ್ಮದ ಪ್ರಾಬಲ್ಯದಿಂದ ಬಂದೇ ತೀರುತ್ತದೆ. ಇದು ಕಾಲಕ್ಕನುಸಾರವಾಗಿ ಬರುವ 'ಕಾಲಕರ್ಮ'. ಕರ್ಮ ನಿಯಮಗಳು ಪ್ರಾಕೃತಿಕ ನಿಯಮಗಳಂತೆಯೇ ಕಾರ್ಯನಿರ್ವಹಿಸುತ್ತವೆ. ಪ್ರಾಕೃತಿಕ ಅನಾಹುತಗಳಾದ ಅತಿವೃಷ್ಟಿ, ಅನಾವೃಷ್ಟಿ, ಬರ, ಚಂಡಮಾರುತ, ಪ್ರವಾಹ, ಭೂಕಂಪ, ಜ್ವಾಲಾಮುಖಿ, 'ಸುನಾಮಿ' ಮುಂತಾದವುಗಳು ನಮಗೆ ಹೇಳಿ ಕೇಳಿ ಬರುತ್ತವೆಯೇ? ಇಂಥ ಸಂಗತಿಗಳನ್ನು ಯಾವ ಜ್ಯೋತಿಷಿ, ವಿಜ್ಞಾನಿಯೂ ನಿಖರವಾಗಿ ಹೇಳುವುದಿಲ್ಲ. ಪ್ರಕೃತಿಯ ಕ್ರಿಯೆಗಳು ಮನುಷ್ಯನ ಸ್ವಾಧೀನದಲ್ಲಿಲ್ಲ. ಅವುಗಳನ್ನು ಗೆಲ್ಲಲು ಮಾನವನಿಗೆ ಇಂದಿಗೂ ಸಾಧ್ಯವಾಗಿಲ್ಲ. ಆದರೆ ಆವುಗಳನ್ನು ನಿಯಂತ್ರಿಸಿ, ನಿವಾರಿಸಲು ಸಾಧ್ಯವಿದೆ. ಈ ದೃಷ್ಟಿಕೋನದಿಂದ ನೋಡಿದಾಗ ದೈವೀಶಕ್ತಿ ಬಲು ದೊಡ್ಡದು. 'ತೇನ ವಿನಾ ತೃಣಮಪಿನಚಲತಿ'–ದೇವರ ಹೊರತಾಗಿ ಒಂದು ಹುಲ್ಲಿನ ಕಡ್ಡಿಯೂ ಅಲುಗಾಡಲಾರದು ಎಂಬ ಮಾತು ಸತ್ಯಸ್ಯ ಸತ್ಯ. ದೈವೀ ಶಕ್ತಿಯ ಮುಂದೆ ಮನುಷ್ಯ ಶಕ್ತಿ ತೃಣಸಮಾನ.

ಆದ್ದರಿಂದಲೇ ಬಸವಣ್ಣನವರು ಮೇಲಿನ ಸಾಲುಗಳಲ್ಲಿ ಬರಬೇಕಾದ್ದು ಬಂದೇ ಬರುತ್ತದೆಂದು, ಅದು ತಪ್ಪದೆಂದು ಹೇಳುತ್ತಾರೆ. ಆದ್ದರಿಂದ ಸಂಕಟಗಳನ್ನು, ಸವಾಲುಗಳನ್ನು ಹೆದರದೆ ಎದುರಿಸುವದೊಂದೇ ಉಪಾಯವೆಂದು ಸೂಚಿಸುತ್ತಾರೆ. ಅದಕ್ಕಾಗಿಯೇ "ಬೆದಕದಿರು ಬೆದಕದಿರು ಬೆದಕದಿಡೆ ಹುರುಳಿಲ್ಲ!" ಎನ್ನುತ್ತಾರೆ. (ವ. ೨೮) ಅವರ ಜೀವನದಲ್ಲಿಯ ಘಟನೆಗಳನ್ನೇ ಗಮನಿಸಿದರೆ ಈ ಸಂಗತಿ ನಮಗೆ ವೇದ್ಯವಾಗುವುದು. ಕಲ್ಯಾಣದಲ್ಲಿಯ ರಕ್ತ ಕ್ರಾಂತಿಯನ್ನು, ಹರಳಯ್ಯ–ಮಧುವರಸರ ಹಿಂಸಾತ್ಮಕ ಮರಣವನ್ನು ಯಾರೂ ನಿರೀಕ್ಷಿಸಿರಲಿಲ್ಲ, ಅಪೇಕ್ಷಿಸಿಯೂ ಇರಲಿಲ್ಲ. ಆದರೆ ಬಾರದದು ಬಂದೇ ಬಿಟ್ಟಿತು, ತಪ್ಪಲೇ ಇಲ್ಲ. 'Time and Tide Wait for None' ಅಲ್ಲವೇ? ಬಸವಣ್ಣನವರು ಕಲ್ಯಾಣದಿಂದ ತಮ್ಮ ನಿರ್ಗಮನ ನಿರೀಕ್ಷಿಸಿರಲಿಲ್ಲ. ಆದರೂ ಅದು ಬಂದೇ ಬಿಟ್ಟಿತಲ್ಲವೇ? ಆದರೆ ಅವರು ಅದಕ್ಕೆ ಅಂಜಲಿಲ್ಲ, ಅಳುಕಲಿಲ್ಲ. ತಮ್ಮ ಜೀವನದುದ್ದಕ್ಕೂ ಕಷ್ಟ–ಕಾರ್ಪಣ್ಯ, ನಿಂದೆ, ಅವಹೇಳನ, ಬೈಗುಳಗಳನ್ನು ಸಹಿಸಿದರು. 'ಬಯ್ದವರೆಲ್ಲ ಬಂಧು'ಗಳೆಂದರು. ಒಂದು ಹಂತದವರೆಗೆ (ಕಲ್ಯಾಣದಿಂದ ನಿರ್ಗಮನದ ಕ್ಷಣದವರೆಗೆ) ದೈವಕೃಪೆ ಅವರಿಗೆ ರಕ್ಷಾಕವಚವಾಗಿತ್ತು.

ಕಾರಣ 'ಕೂಡಲಸಂಗಮ ದೇವರ ರಾಜತೇಜದಲ್ಲಿಪ್ಪೆ' ಎಂದು ಹೇಳುತ್ತಾರೆ. ಅವರ ಧೈರ್ಯ ಮೆಚ್ಚುವಂತಹದು. 'ನಾಳೆ ಬಪ್ಪುದು (ಬರುವುದು) ನಮಗಿಂದೆ ಬರಲಿ, ಇಂದು ಬಪ್ಪುದು ನಮಗೀಗಲೆ ಬರಲಿ' ಎಂದು ಆಶಿಸುತ್ತಾರೆ–ಎದುರಿಸುವ ಧೈರ್ಯದ ಬಲದಿಂದ.

"ಜಾತಸ್ಯ ಮರಣಂ ಧ್ರುವಂ" ('ಅದ್ಯ ವಾ ಅಬ್ದ ಶತಾಂತೇವಾ ಪ್ರಾಣಿನಾಂ ಮೃತ್ಯುರ್ವೆ ಧ್ರುವಃ') ಎಲ್ಲ ಜೀವಿಗಳಿಗೂ ಸಾವು ನಿಶ್ಚಿತವೆಂದು ನಿರೂಪಿಸುವದರ ಜೊತೆಗೆ ಅದು ದೇವರು ಬರೆದ ಬರಹ, ಕಾರಣ ಅದನ್ನು ತಪ್ಪಿಸಲು ಪಾಲನಕರ್ತ, ಸೃಷ್ಟಿಕರ್ತ, ಹರಿಬ್ರಹ್ಮರಿಗೂ ಸಾಧ್ಯವಿಲ್ಲವೆಂಬ ಶಾಶ್ವತ ಸತ್ಯವನ್ನೂ ಹೇಳುತ್ತಾರೆ. ಮರಣ ಒಂದು ಸ್ವಾಭಾವಿಕ, ಪ್ರಾಕೃತಿಕ ಕ್ರಿಯೆ. ಸಾವೆಂದರೆ ಸಾಮಾನ್ಯ ಅರ್ಥದಲ್ಲಿ ಇಂದ್ರಿಯಗಳು ನಿಶ್ಶಕ್ತವಾಗಿ, ದೇಹ ದುರ್ಬಲಗೊಂಡು, ಶರೀರದಿಂದ ಜೀವ ಹೊರಟು ಹೋಗುವುದಾಗಿದೆ. ಇಲ್ಲಿ ಬಸವಣ್ಣನವರು ಸಾವನ್ನು ಆಹ್ವಾನಿಸುವಂತೆ ಕಾಣುತ್ತದೆ. ನಾವು ಹೆದರಿದರೂ ಅದು ನಮ್ಮನ್ನು ಬಿಡದು. ಹುಟ್ಟಿದ ಬಳಿಕ ಈ ಜನ್ಮದಲ್ಲಿ ಸಾಯಲೇಬೇಕು. ಸಾಮಾನ್ಯವಾಗಿ ಸಾವಿಗೆ ಹೆದರುವವರೇ ಹೆಚ್ಚು. 'ಮಕ್ಕಳು ಕತ್ತಲೆಗೆ ಹೆದರುವಂತೆ ಮನುಷ್ಯ ಮರಣಕ್ಕೆ ಹೆದರುತ್ತಾನೆ' (ಕವಿ ಬೇಕನ್). ಏಕೆಂದರೆ ಅದು ದುಃಖ, ಸಂಕಟ, ಏಕಾಕಿತನ, ಪ್ರೀತಿಪಾತ್ರರಿಂದ ಅಗಲುವಿಕೆ, ಸಂಪತ್ತನ್ನು ಕಳೆದುಕೊಳ್ಳುವಿಕೆ, ಆಸೆ ಆಕಾಂಕ್ಷೆಗಳು ತೀರದಿರುವಿಕೆ, ಶರೀರದ ಹಾನಿ (Loss of Identity) ಮುಂತಾದವುಗಳೆಲ್ಲ ಕಾಡುತ್ತವೆ.

ಬದುಕಿನ ಇನ್ನೊಂದು ಬದಿಯೇ ಮರಣ! ಇದು ಶರೀರಕ್ಕೆ ಬರುವ ಪ್ರಾಕೃತಿಕ ಪ್ರಕ್ರಿಯೆ. ಶರೀರದೊಳಗಿರುವ ಆತ್ಮ ಅಮರ. ಇದು, ನಾವು ಹರಿದ ಬಟ್ಟೆಗಳನ್ನು ಬದಲಿಸುವಂತೆ ಶರೀರಗಳನ್ನು ಬದಲಿಸುತ್ತದೆ "ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಪರಾಣಿ! ತಥಾಶರೀರಾಣಿ ವಿಹಾಯ ಜೀರ್ಣಾನ್ಯ–ನ್ಯಾನಿ ಸಂಯತಿ ನವಾನಿ ದೇಹೀ ॥ (ಭಗವದ್ ಗೀತಾ), ಥಿಯಾಸಪಿ (ಬ್ರಹ್ಮಜ್ಞಾನ)ಯ ಪ್ರತಿಪಾದಕಿ ಆ್ಯನಿ ಬೆಸೆಂಟ, "Death is the gateway of rebirth" ಎಂದು ಅಭಿಪ್ರಾಯಪಡುತ್ತಾಳೆ. ಗ್ರೀಸ ತತ್ವಜ್ಞಾನಿ ಸಾಕ್ರೇಟಿಸ್ ಪ್ರಕಾರ 'ಮರಣ ದೇಹದ ನಾಶ ಅಥವಾ ಪ್ರಜ್ಞಾರಹಿತ ಸ್ಥಿತಿ, ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಆತ್ಮದ ಸ್ಥಾನಾಂತರ". ಮುಪ್ಪಿನವರಿಗೆ ಮರಣ ಅಧಿಕಾಧಿಕವಾಗಿ ಪೀಡಿಸುತ್ತದೆ. ಸಿಸಿರೋನಿಗೆ ಮರಣ ಭಯಾನಕವೆನಿಸಿದರೆ, ಕ್ಯಾಟೋನಿಗೆ ಅಪೇಕ್ಷಣೀಯ (desirable). ಸಾವು ಜೀವನದ ದೀರ್ಘ ಸಂಘರ್ಷದ ನಂತರ ಬರುವ ಚಿರನಿದ್ರೆ ಅಥವಾ ಶಾಂತಿಯ ನೆಲೆ ಎಂಬ ಅಭಿಪ್ರಾಯವೂ ಇದೆ. ಜಿ.ಆರ್.ಎಲ್. ಅಂಡರಸನ್ ಪ್ರಕಾರ, "ಬೆರಳುಗಳು ಬರೆದು ಬರೆದು ದಣಿದು ವಿಶ್ರಾಂತಿಗಾಗಿ ಮಡಚಿಕೊಳ್ಳುವಂತೆ ಸಾವು ಕೂಡ ದೇವರಲ್ಲಿ ಮಡಚಿಕೊಳ್ಳುತ್ತದೆ." (.....'they (fingers) bit tired and fold back into the hand for rest, Death is like that, just a folding into God').

ಬುದ್ಧ, "ಜೀವನವು ಅನಿಶ್ಚಿತವಾಗಿದೆ. ಆದರೆ ಮರಣ ಮಾತ್ರ ನಿಶ್ಚಿತ"ವೆಂದು ಅಭಿಪ್ರಾಯಪಡುತ್ತಾನೆ. ("Life is uncertain-but Death is certain") ಈ ಮರಣ ಭಯ ನಮ್ಮ ಮಿದುಳಿನಲ್ಲಿಯೇ ಮೊದಲು ಹುಟ್ಟುತ್ತದೆ. ಭಯ ನೈಸರ್ಗಿಕ ಪ್ರಕ್ರಿಯೆ, ಮಾನಸಿಕ ಕ್ರಿಯೆಯೂ ಹೌದು.

ಪ್ರವಾದಿ ಬಸವಣ್ಣನವರು ಮರಣವನ್ನು ಭಿನ್ನವಾಗಿ ನೋಡಿದರು, ಸ್ವೀಕರಿಸಿದರು. ಸಾವು ಸಾವಿರ ಚೇಳುಗಳು ಕಡಿದಷ್ಟು ನೋವಿನದಾಗಿದ್ದರೂ ಕೂಡ, "ಮರಣವೇ ಮಹಾನವಮಿ" ಎಂದರು. ಏಕೆಂದರೆ ಅವರಲ್ಲಿ ಅಹಂ ಸತ್ತಿತ್ತು, ಅಜ್ಞಾನ ಅಳಿದಿತ್ತು, ಸುಜ್ಞಾನ ಅಳವಟ್ಟಿತ್ತು. ಕಾರಣ ಅದನ್ನು ಹಬ್ಬದಂತೆ ಆಚರಿಸಬೇಕು, ಹರ್ಷದಿಂದ ಸ್ವೀಕರಿಸಬೇಕೆಂದರು. ಅವರು ವಿಧಿವಾದವನ್ನು ಪ್ರಸ್ತಾಪಿಸುವಂತೆ ತೋರಿದರೂ, ವಾಸ್ತವತೆಯನ್ನು ವಿವರಿಸುತ್ತಿದ್ದಾರೆ; ಮುಂದಿನ ಮಾರ್ಗವನ್ನು ಸೂಚಿಸುತ್ತಿದ್ದಾರೆ. ಆ ಮಾರ್ಗವೆಂದರೆ ಅದು ದೇವರ 'ಪ್ರಸಾದ'ವೆಂಬ ಸ್ವೀಕೃತಿ. ಸುಖ–ದುಃಖಗಳನ್ನು ಸಮಭಾವದಿಂದ, ಸಮಚಿತ್ತದಿಂದ ಪ್ರಸನ್ನ ಭಾವದಿಂದ ಸ್ವೀಕರಿಸುವುದೇ 'ಪ್ರಸಾದ'. ಶರಣ ಮರಣವನ್ನು ಈ ಭಾವದಿಂದ ನೋಡುತ್ತಾನೆ ಮತ್ತು ಸ್ವೀಕರಿಸುತ್ತಾನೆ. ನಾವು ಮರಣ ಪ್ರಜ್ಞೆಯಿಂದ ಎಚ್ಚತ್ತು ದೇವರು, ಧರ್ಮದಲ್ಲಿ ನಂಬಿಗೆಯಿಟ್ಟು ಗುರು ತೋರಿದ ದಾರಿಯಲ್ಲಿ ಸಾಧನೆ ಮಾಡಿ ಮುಕ್ತಿ ಪಡೆಯಬೇಕು; ಲಿಂಗಾಂಗ ಸಾಮರಸ್ಯ ಹೊಂದಬೇಕು. ಆಗ ಮಾತ್ರ ಮಾನವ ಮರಣವನ್ನು ಗೆದ್ದ ಮಹಾಂತನಾಗುತ್ತಾನೆ. ಆದ್ದರಿಂದ 'ಎಮ್ಮವರಿಗೆ (ಶರಣರಿಗೆ) ಸಾವಿಲ್ಲ; ಎಮ್ಮವರು ಸಾವನರಿಯರು' ಎನ್ನಲಾಗಿದೆ. ಶರಣನೆಂದರೆ– '....ಭಾನುವಿನ ಉದಯಕ್ಕೆ (ಕಾಲಕ್ಕೆ ಒಳಗಾಗದವನು) ಒಳಗಾಗದಂಥ ಶರಣನು' (ವ. ೩೫೮). ಶರಣನಾಗುವುದೇ ಮಾನವನ ಗುರಿ. ಮರಣ ಪ್ರಜ್ಞೆಯಿಂದ ನಾವು ಎಚ್ಚರಗೊಳ್ಳಬೇಕೆಂದು ಬಸವಣ್ಣನವರು ಶಾಶ್ವತ ಸತ್ಯವಾದ ಸಾವನ್ನು ಪ್ರಸ್ತಾಪಿಸಿ ಎಚ್ಚರಿಸುತ್ತಿದ್ದಾರೆ; ಮುಂದಿನ ಮಾರ್ಗವನ್ನು ಸೂಚಿಸುತ್ತಿದ್ದಾರೆ. ಏಕೆಂದರೆ 'ಅರಿತರೆ ಶರಣ ಮರೆತರೆ ಮಾನವ' ನಲ್ಲವೇ? (ವ ೮೬೦) ಅದಕ್ಕಾಗಿ ದೇವರನ್ನು ಪೂಜಿಸಬೇಕು, ಸದಾ ಹೃದಯ ಮಂದಿರದಲ್ಲಿ ನೆನೆಯಬೇಕು. ಇದರಿಂದ ಭಕ್ತರು 'ಕಾಲ ಕರ್ಮ ರಹಿತರು, ಭವವಿರಹಿತರು' ಆಗುತ್ತಾರೆ; ಶಿವಸ್ವರೂಪಿಗಳಾಗುತ್ತಾರೆ.

ಆಹಾರ ಪದಾರ್ಥಗಳನ್ನು ಲಿಂಗಕ್ಕೆ ಸೇವಿಸುವುದು ಪ್ರಸಾದ ತತ್ವದ ಒಂದು ಮುಖವಾದರೆ, ತನ್ನನ್ನೆಲ್ಲ ಆ ದೇವರಿಗೆ ಅರ್ಪಿಸುವುದು ಇನ್ನೊಂದು ಮುಖ. ಈ ಔಪಚಾರಿಕ ಪ್ರಸಾದವಲ್ಲದೆ, "ತರ್ಕೈಸಿ ನಿಮ್ಮವನಪ್ಪಿಕೊಂಡೊಡೆ ನಿಶ್ಚಯ ಪ್ರಸಾದ" ಎಂಬಲ್ಲಿ ಮರಣವನ್ನು ಮಹಾಪ್ರಸಾದವಾಗಿ ಪರಿವರ್ತಿಸುವ ಕುಶಲ ಕಲೆ ನಿಹಿತವಾಗಿದೆ.

○







# ಆತಂಕ ಸಮಾಜದ ಆರ್ಥಿಕ ನಿರೀಕ್ಷೆಗಳು

–ಡಾ. ಸಿ.ಕೆ. ರೇಣುಕಾರ್ಯ, ಮೈಸೂರು

ಈ ಹೊತ್ತಿನಲ್ಲಿ ಭಾರತವನ್ನು ಅರ್ಥಮಾಡಿಕೊಳ್ಳುವುದಕ್ಕೆ ಸಮಾಜಶಾಸ್ತ್ರ, ಮನಃಶಾಸ್ತ್ರ, ಅರ್ಥಶಾಸ್ತ್ರ ಅಥವಾ ಅನೇಕ ಸಾಮಾಜಿಕ ಸಂಶೋಧನೆಗಳು ಅಭಿವೃದ್ಧಿಪಡಿಸಿರುವ ಅನೇಕ ಮಾದರಿಗಳಾಚೆಗೆ ಬೇರೊಂದು ಮನಃಸ್ಥಿತಿಯ ಅಗತ್ಯವಿದೆ. ನಮ್ಮ ಇಂದಿನ ಆತಂಕಗಳಿಗೆ ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣಗಳು ಹೆಚ್ಚಿನ ಉದ್ವಿಗ್ನತೆಯನ್ನು ಉಂಟುಮಾಡುತ್ತಿವೆ. ನಮ್ಮಲ್ಲಿನ ನಕ್ಸಲರ ಬಂಡಾಯ ಚಳುವಳಿ, ರೈತ ಚಳುವಳಿಗಳು ಮತ್ತು ಇತರ ಸಾಮಾಜಿಕ ಚಳುವಳಿಗಳು, ಆರ್ಥಿಕ ನಿರೀಕ್ಷೆಗಳನ್ನು ಪ್ರತ್ಯಕ್ಷವಾಗಿ ವ್ಯಕ್ತಪಡಿಸುತ್ತಿವೆ. ಕಳೆದ ೫೦ ವರ್ಷಗಳಲ್ಲಿದ್ದ ಸರ್ಕಾರದ ಆರ್ಥಿಕ ಅಭಯಹಸ್ತ ಇಂದು ಅಗೋಚರವಾಗುತ್ತಾ ಬಂದಿದೆ. ಸಮಾಜದಲ್ಲಿ ಆರ್ಥಿಕವಾಗಿ ಹಿಂದುಳಿದ ವರ್ಗವು ಸಾಮಾನ್ಯ ಜೀವನಕ್ಕಾಗಿ ಅಸ್ಥಿರತೆಯನ್ನು ಎದುರಿಸುತ್ತಿದೆ.

ಆರ್ಥಿಕ ಆತಂಕಗಳ ಮುಖ್ಯ ಸಮಸ್ಯೆಗಳು ಬಡತನ, ನಿರುದ್ಯೋಗ, ಆರೋಗ್ಯ ಕ್ಷೇತ್ರಗಳಿಗೆ ಸೇರುತ್ತದೆ. ಗ್ರಾಮೀಣ ಬಡಜನತೆ ಹಿಂದೆಂದೂ ಇಲ್ಲದಷ್ಟು ತೀವ್ರತರ ಕಷ್ಟವನ್ನು ಅನುಭವಿಸುತ್ತಿದ್ದಾರೆ. ಸಮಾಜವನ್ನು ಆಕ್ರಮಿಸಿರುವ ಟಿವಿ, ಮೊಬೈಲ್, ಇಂಟರ್‌ನೆಟ್ ಸಾಧನಗಳು ಜನರ ಆಶೋತ್ತರಗಳನ್ನು ಒಂದು ಕಡೆ ಮೇಲಕ್ಕೆ ಏರಿಸಿದ್ದರೆ, ಕೊಳ್ಳುವ ಶಕ್ತಿಯೇ ಇಲ್ಲದ ಬಡತನದಿಂದಾಗಿ, ಬಡವರು ಹತಾಶ ಭಾವನೆಯನ್ನು ವ್ಯಕ್ತಪಡಿಸುತ್ತಿದ್ದಾರೆ. ಯಾವ ದೃಷ್ಟಿಯಿಂದ ನಾವು ನೋಡಿದರೂ ರಾಷ್ಟ್ರದ ಆದ್ಯ, ಆತಂಕಗಳು ಬಡತನ ಮತ್ತು ನಿರುದ್ಯೋಗಕ್ಕೆ ಸಂಬಂಧಿಸುತ್ತವೆ. ಜಾಗತೀಕರಣದ ಹಿನ್ನೆಲೆಯಲ್ಲಿ ಬಡತನದ ತೀವ್ರತೆ ಅದರಲ್ಲೂ ಗ್ರಾಮೀಣ ಬಡತನದ ತೀವ್ರತೆ ತುಂಬಾ ಹೆಚ್ಚಾಗಿದೆ. ಹೀಗಾಗಿ ಕೃಷಿಯಿಂದ ಕೃಷಿಯೇತರ ಕೆಲಸಕ್ಕೆ ತೀವ್ರವಾದ ವರ್ಗಾವಣೆ ನಡೆಯುತ್ತಿದೆ. ಗ್ರಾಮೀಣ ಪ್ರದೇಶದಲ್ಲಿ ಬಲವಾದ ಹಿಡಿತವನ್ನು ಹೊಂದಿದ್ದ ಜಾತಿ ಮತ್ತು ಕೃಷಿ ತಮ್ಮ ಪ್ರಾಧಾನ್ಯತೆಯನ್ನು ಕಳೆದುಕೊಳ್ಳುತ್ತಾ ಬರುತ್ತಿವೆ. ಕೃಷಿಯಲ್ಲಿ ಸ್ಥಗಿತತೆ ಉಂಟಾಗಿರುವುದರಿಂದ ಕೃಷಿಕರು ಹೆಚ್ಚು ಹೆಚ್ಚಾಗಿ ಪಟ್ಟಣಗಳ ಕಡೆ ವಲಸೆ ಹೋಗುವ ಪ್ರಕ್ರಿಯೆ ಮುಂದುವರಿದಿದೆ. ಶ್ರೀಮಂತ ಕೃಷಿಕರೂ ಸಹ ಹೊಸ ಹೊಸ ಆಶೋತ್ತರಗಳಿಂದಾಗಿ ಕೃಷಿಯೇತರ ವಿಷಯಗಳಲ್ಲಿ ಹೂಡಿಕೆ ಮಾಡುತ್ತಿದ್ದಾರೆ. ಶ್ರೀಮಂತ ಕೃಷಿಕರು ಸಾಕಷ್ಟು ರಾಜಕೀಯ ಸಂಪರ್ಕವನ್ನು ಹೊಂದಿದ್ದು ತಮ್ಮ ಗ್ರಾಮಗಳಿಂದ ಸಂಪತ್ತನ್ನು ಅರ್ಜಿಸುತ್ತಿದ್ದರೂ ಪಟ್ಟಣ ಪ್ರದೇಶಗಳಲ್ಲಿ ಐಷರಾಮಿ ಜೀವನವನ್ನು ನಡೆಸುತ್ತಿದ್ದಾರೆ. ಒಟ್ಟಾಗಿ ನೋಡಿದಾಗ ಜಾಗತೀಕರಣದ ಹಿನ್ನೆಲೆಯಲ್ಲಿ ಇಡೀ ಜನ ಸಮೂಹದ ಆಶೋತ್ತರಗಳಲ್ಲೇ ಬದಲಾವಣೆಗಳು ಉಂಟಾಗಿವೆ. ಹೊಸಹೊಸ ಬಯಕೆಗಳು ಹುಟ್ಟಿಕೊಂಡಿವೆ. ಸರಕು ಮತ್ತು ಸೇವೆಗಳ ಬೃಹತ್ ಸೃಷ್ಟಿಯಿಂದಾಗಿ ಜನರ ಕೊಳ್ಳುವ ಆಶೋತ್ತರಗಳು ಆದಾಯ ಇರಲಿ, ಇಲ್ಲದಿರಲಿ ಹೆಚ್ಚಾಗಿವೆ. ಟಿ.ವಿ. ಚಾನಲ್‌ಗಳು ಇದಕ್ಕೆ ಇನ್ನೂ ಹೆಚ್ಚಿನ ಇಂಬನ್ನು ಕೊಟ್ಟಿವೆ.

ಬಹುತೇಕ ಜನರ ಬಡತನ ಮತ್ತು ಅವರ ಎಲ್ಲಾ ಆಶೋತ್ತರಗಳು ಆ ಜನರ ಮಟ್ಟಿಗೆ ಮಾತ್ರ ದುರಂತವಲ್ಲ. ಅದು ರಾಷ್ಟ್ರದ ಮಟ್ಟಿಗೆ, ಅಸಾಧಾರಣವಾದ ಸವಾಲು. ಬಡತನ ನಿವಾರಣೆಯ ಕಾರ್ಯಕ್ರಮದಲ್ಲಿ ತೊಡಗಿರುವ ಪ್ರತಿಯೊಂದು ರೂಪಾಯಿಯಲ್ಲೂ ಬಡವರಿಗೆ ತಲುಪುವುದು ಕೇವಲ ೧೦ ಪೈಸೆ ಎಂದಾದಾಗ ಅಂತಹ ಸಮಾಜದಲ್ಲಿ ಆತಂಕವಲ್ಲದೆ ಮತ್ತೇನಿರುತ್ತದೆ.? ರಾಷ್ಟ್ರದ ಅತ್ಯಂತ ಬಡವರಿಗೆ, ರಾಷ್ಟ್ರಾದಾಯದ ಶೇ. ೧೦ ದೊರೆಯುತ್ತಿದ್ದರೆ, ಶೇ. ೨೦ರಷ್ಟಿರುವ ಶ್ರೀಮಂತರಿಗೆ ಅದರ ಶೇ. ೪೧.೬ ರಷ್ಟು ಲಭ್ಯವಾಗುತ್ತಿದೆ.

ಅಂತರ ರಾಷ್ಟ್ರೀಯ ಮಟ್ಟದಲ್ಲಿ ನಡೆಯುವ ಉತ್ಪಾದನೆ ಮತ್ತು ಸಂಪತ್ತಿನ ಸೃಷ್ಟಿ ಇಂದು ತುಂಬಾ ಮಹತ್ವವಾದದ್ದು. ಈ ದೃಷ್ಟಿಯಿಂದ ನಮ್ಮ ದೇಶ ಇಂದಿಗೂ ಬಡ ರಾಷ್ಟ್ರವೇ. ನಮ್ಮ ಒಟ್ಟು ರಾಷ್ಟ್ರಾದಾಯ ೩೦೬೮ ಬಿಲಿಯನ್ ಡಾಲರ್‌ಗಳು, ಚೈನಾದ ರಾಷ್ಟ್ರಾದಾಯ ೬೪೩೫ ಬಿಲಿಯನ್ ಡಾಲರ್‌ಗಳು. ನಮ್ಮ ತಲಾ ವರಮಾನ ೨೮೮೦ ಡಾಲರ್‌ಗಳಾದರೆ, ಚೈನಾದ್ದು ೪೯೩೦ ಡಾಲರ್‌ಗಳು. ಅಮೇರಿಕಾ ಸಂಯುಕ್ತ ಸಂಸ್ಥಾನದ ರಾಷ್ಟ್ರೀಯ ವರಮಾನ ೧೦,೯೪೬ ಬಿಲಿಯನ್ ಡಾಲರ್‌ಗಳು. ಆ ರಾಷ್ಟ್ರದ ತಲಾ ವರಮಾನ ೩೭,೬೧೦ ಡಾಲರ್‌ಗಳು. ಈ ಅಂಕಿ ಸಂಖ್ಯೆಗಳು ಎಲ್ಲಿಂದ ಎಲ್ಲಿಗೆ ಎಂದು ನಮ್ಮ ಮನಸ್ಸಿನಲ್ಲಿ ಮೂಡುವುದು ಸಹಜ. ಆದರೆ ಇಡೀ ವಿಶ್ವದ ಅನುಭೋಗ ಬಯಕೆಗಳನ್ನು ಸೃಷ್ಟಿಸುವ ರಾಷ್ಟ್ರ ಮುಖ್ಯವಾಗಿ ಅಮೆರಿಕಾ ಸಂಯುಕ್ತ ಸಂಸ್ಥಾನ ಮತ್ತು ಬಂಡವಾಳಶಾಹಿ ಪಾಶ್ಚಾತ್ಯ ರಾಷ್ಟ್ರಗಳು. ನಮ್ಮ ದೇಶದ ಜನರ ಆರ್ಥಿಕ ಆತಂಕಗಳು ಸಹ ಅಮೆರಿಕಾದ ಅನುಭೋಗ ಪ್ರವೃತ್ತಿಯಿಂದ ನಿರ್ದೇಶಿತವಾಗುತ್ತಿವೆ ಎನ್ನುವುದು ಆಶ್ಚರ್ಯಕರವಾದರೂ ಸತ್ಯದ ಸಂಗತಿ. ಆದರೆ ನಮ್ಮಲ್ಲಿನ ಸಾಮಾನ್ಯ ಜನ, ಹೆಚ್ಚಿನ ಅನುಭೋಗವನ್ನು ಮುಟ್ಟುವುದು ಒಂದು ಮರೀಚೀಕೆಯನ್ನು ಹಿಂಬಾಲಿಸಿದಂತೆ. ಏಕೆಂದರೆ, ನಮ್ಮ ಸಾಮಾನ್ಯ ಜನರ ಬಡತನ ತೀವ್ರತರವಾದದ್ದು, ತುಂಬಾ ಆತಂಕಕ್ಕೆ ಎಡೆ ಮಾಡಿಕೊಡುವಂಥದ್ದು.



ಉದಾಹರಣೆಗೆ ಅಂತರ ರಾಷ್ಟ್ರೀಯ ಮಟ್ಟದಲ್ಲಿ ಬಡತನವನ್ನು ಪ್ರತಿ ದಿನಕ್ಕೆ ೧ ಡಾಲರ್ ಆದಾಯದ ಲೆಕ್ಕದಲ್ಲಿ ಅಳತೆ ಮಾಡಲಾಗುತ್ತದೆ. ಒಂದು ಡಾಲರ್‌ಗಿಂತ ಕಡಿಮೆ ಆದಾಯವಿರುವವರನ್ನು ಬಡತನದ ರೇಖೆಯಿಂದ ಕೆಳಗಿರುವವರು ಎಂದು ಹೇಳಲಾಗುತ್ತದೆ. ಇಂತಹವರ ಸಂಖ್ಯೆ ನಮ್ಮ ರಾಷ್ಟ್ರದಲ್ಲಿ ಶೇ. ೩೪.೭ರಷ್ಟು ಇದೆ. ದಿನಕ್ಕೆ ೨ ಡಾಲರ್‌ಗಿಂತ ಕಡಿಮೆ ಆದಾಯದವರು ಶೇ. ೭೯.೯ ಇದ್ದಾರೆ. ಆತಂಕಕ್ಕೆ ಇದಕ್ಕಿಂತ ಬೇರೆ ಕಾರಣ ಬೇಕೆ?

ಬಡಜನರ ಆಶೋತ್ತರಗಳು ಎಂದರೆ ಅನೇಕ ತೃಪ್ತಿಗೊಳ್ಳಲಾರದ ಬಯಕೆಗಳ ಚಿತ್ರ ನಮ್ಮ ಮುಂದೆ ಬರುತ್ತದೆ. ಬಡತನದಿಂದಾಗಿ ಜನರ ಕೊಳ್ಳುವ ಶಕ್ತಿ ನಮ್ಮ ದೇಶದಲ್ಲಿ ತುಂಬಾ ಮಿತವಾಗಿದೆ. ರಾಷ್ಟ್ರದಾದ್ಯಂತ ಇದು ಬೇರೆ ಬೇರೆ ಸ್ವರೂಪದಲ್ಲಿದೆ. ರಾಷ್ಟ್ರದ ಒಟ್ಟು ಬಡವರಲ್ಲಿನ ಶೇ. ೭೦ರಷ್ಟು ಜನ ಉತ್ತರ ಪ್ರದೇಶ, ಬಿಹಾರ, ಮಧ್ಯಪ್ರದೇಶ, ಮಹಾರಾಷ್ಟ್ರ, ಪಶ್ಚಿಮಬಂಗಾಳ, ಒರಿಸ್ಸಾ–ಈ ಆರು ರಾಜ್ಯಗಳಲ್ಲಿ ಕೇಂದ್ರೀಕೃತವಾಗಿದ್ದಾರೆ. ಈ ರಾಜ್ಯಗಳು ರಾಷ್ಟ್ರದ ಶೇ. ೫೦ರಷ್ಟು ಜನಸಂಖ್ಯೆಯನ್ನು ಪ್ರತಿನಿಧಿಸುತ್ತಿದ್ದಾರೆ. ಅವುಗಳಲ್ಲಿ ಮೊದಲ ೩ ರಾಜ್ಯಗಳಲ್ಲಿ ರಾಷ್ಟ್ರದ ಶೇ. ೩೬ರಷ್ಟು ಜನಸಂಖ್ಯೆ ಇದ್ದು, ಒಟ್ಟು ಬಡತನದಲ್ಲಿ ಶೇ. ೪೮ ರಷ್ಟನ್ನು ಅದು ಪ್ರತಿನಿಧಿಸುತ್ತದೆ. ಬಡತನದಲ್ಲಿ ಹೆಚ್ಚಾಗಿ ಕೃಷಿ ಕಾರ್ಮಿಕರು, ಸಣ್ಣ ಮತ್ತು ಅತಿ ಸಣ್ಣ ರೈತರು, ಗ್ರಾಮೀಣ ಕುಶಲ ಕರ್ಮಿಗಳು ಇದ್ದಾರೆ. ಧರ್ಮದ ಆಧಾರದ ಮೇಲೆಯೇ ನಿಂತಿರುವ ಈ ಸಮಾಜದಲ್ಲಿ ಬಡತನ ಸಹ ಧರ್ಮದೊಡನೆ ಸಂಬಂಧ ಹೊಂದಿರುವುದು ಅನೇಕ ಸಂಶೋಧನೆಗಳಿಂದ ವ್ಯಕ್ತಪಟ್ಟಿದೆ. ವಿವಿಧ ವರ್ಗದ ಜನರ ಸರಾಸರಿ ಅನುಭೋಗ ವೆಚ್ಚವನ್ನು ಹೋಲಿಸಿದರೆ ಮುಸಲ್ಮಾನರಲ್ಲಿ ತಿಂಗಳ ತಲಾ ಅನುಭೋಗದ ವೆಚ್ಚ ಅತ್ಯಂತ ಕಡಿಮೆ ಇರುವುದು ವ್ಯಕ್ತವಾಗುತ್ತದೆ. ಸಿಖ್ಖರು ಮತ್ತು ಕ್ರಿಶ್ಚಿಯನ್ನರ ಸರಾಸರಿ ತಲಾ ವೆಚ್ಚ ಗ್ರಾಮೀಣ ಹಾಗೂ ಪಟ್ಟಣ ಪ್ರದೇಶದಲ್ಲಿ ಅತ್ಯಂತ ಹೆಚ್ಚಾಗಿದೆ. ಸಿಖ್ಖರಲ್ಲಿ ಬಡತನ ಅತ್ಯಂತ ಕಡಿಮೆ ಇದೆ. ಗ್ರಾಮೀಣ ಪ್ರದೇಶದಲ್ಲಿ ಹಿಂದೂಗಳು ಅತ್ಯಂತ ಕಡು ಬಡವರಾಗಿದ್ದಾರೆ. ಆದ್ದರಿಂದ ಬಡತನ ನಿರ್ಮೂಲನ ಕಾರ್ಯಕ್ರಮಗಳು ನಡೆಯುವಾಗ ಸರ್ಕಾರ ಅತ್ಯಂತ ಎಚ್ಚರಿಕೆಯ ನೀತಿಯನ್ನು ಅನುಸರಿಸಬೇಕಾಗುತ್ತದೆ. ಎಲ್ಲಾ ವರ್ಗದ ಜನರಿಗೂ ಅನುಕೂಲವಾಗುವ ರೀತಿಯಲ್ಲಿ ನೀತಿಗಳನ್ನು ರೂಪಿಸಬೇಕಾಗುತ್ತದೆ.

ಜನರನ್ನು ಕಾಡುತ್ತಿರುವ ಮತ್ತೊಂದು ಪ್ರಮುಖ ಆತಂಕವೆಂದರೆ ನಿರುದ್ಯೋಗ. ೧೯೯೯–೨೦೦೦ದಲ್ಲಿ ನಿರುದ್ಯೋಗ ೨.೭ ಕೋಟಿ ಇದ್ದು, ೨೦೦೨ರಷ್ಟರಲ್ಲಿ ಇದು ೩.೫ ಕೋಟಿಗೆ ಏರಿದೆ. ನಿರುದ್ಯೋಗದಲ್ಲಿ ಶೇಕಡ ೭೫ರಷ್ಟು ಗ್ರಾಮೀಣ ಪ್ರದೇಶದಲ್ಲಿದೆ. ರಾಷ್ಟ್ರೀಯ ಗ್ರಾಮೀಣ ಖಾತರಿ ಯೋಜನೆ ಪೂರ್ಣವಾಗಿ ಅನುಷ್ಠಾನಕ್ಕೆ ಬಂದರೆ ಗ್ರಾಮಾಂತರ ಪ್ರದೇಶದ ಕೋಟ್ಯಂತರ ಬಡ ಕುಟುಂಬಗಳಿಗೆ ಉದ್ಯೋಗದ ಅವಕಾಶಗಳು ಸಿಗುವುದು ಸಾಧ್ಯ. ಆದರೆ ಎಷ್ಟರಮಟ್ಟಿಗೆ ಇದು ಅನುಷ್ಠಾನಕ್ಕೆ ಬರುತ್ತದೆ ಎನ್ನುವುದು ಪ್ರಶ್ನಾರ್ಹವಾದ ವಿಷಯ. ಸವಿವರವಾಗಿ ನಿರ್ಮಿತವಾಗಿರುವ ನೀಲಿ ನಕಾಶೆಯೇ ಇಲ್ಲದಿರುವುದು ಒಂದು ನ್ಯೂನತೆ. ಪ್ರತಿ ವರ್ಷ ಶೇ. ೩೫ರಷ್ಟು ಜನ ನಿರುದ್ಯೋಗದ ವ್ಯಾಪ್ತಿಗೆ ಸೇರುತ್ತಿದ್ದಾರೆ. ನಿರುದ್ಯೋಗದ ಸಮಸ್ಯೆಯನ್ನು ಹೇಗೆ ಪರಿಹರಿಸಬೇಕು ಎನ್ನುವುದರ ಬಗ್ಗೆ ಯಾರಿಗೂ ಸ್ಪಷ್ಟವಾದ ನಿಲುವಿಲ್ಲ. ಆತಂಕಕರವಾದ ವಿಷಯವೆಂದರೆ, ಗ್ರಾಮೀಣ ಪ್ರದೇಶದಿಂದ ಬರುವ ಜನರು, ನಾನಾ ರೀತಿಯ ಕೂಲಿ ಕೆಲಸಗಳಲ್ಲಿ ನೇಮಕಗೊಳ್ಳುತ್ತಾರೆ. ಅವರಿಗೆ ದೊರೆಯುವ ದಿನಗೂಲಿ ಬಹಳ ಕಡಿಮೆ. ಇವರ ಆಶೋತ್ತರಗಳೇನು? ಅವು ಆತಂಕಕಾರಿಯಲ್ಲವೆ?

ಭ್ರಷ್ಟಾಚಾರ ಸಮಾಜದ ಎಲ್ಲಕ್ಕಿಂತ ಪ್ರಮುಖವಾದ ಸಾಮಾಜಿಕ ಆತಂಕವಾಗಿದೆ. ಇಂದು ಈ ಸಮಸ್ಯೆ ಇಡೀ ಭಾರತವನ್ನೇ ತಲ್ಲಣಗೊಳಿಸಿದೆ. ಯಾರೂ ಏನನ್ನೂ ಮಾಡಲಾಗದ ಅಸಹಾಯಕ ಸ್ಥಿತಿ ಇದರಿಂದಾಗಿ ನಿರ್ಮಾಣವಾಗಿದೆ. ಸಮಸ್ತ ಅಭಿವೃದ್ಧಿ ಕಾರ್ಯಗಳನ್ನು ಈ ಸಮಸ್ಯೆ ಹಿಮ್ಮೆಟ್ಟಿಸಿ, ಭಯಂಕರ ಜಾಡ್ಯವಾಗಿ ಭ್ರಷ್ಟಾಚಾರ ಹೊರಹೊಮ್ಮಿದೆ. ಇದು ಏಡ್ಸ್‌ಗಿಂತ ಭಯಂಕರ ಸಮಸ್ಯೆಯಾಗಿದೆ. ನಮ್ಮ ರಾಷ್ಟ್ರಾದಾಯದ ಶೇ. ೪೦ ರಷ್ಟು ಅಂದರೆ ೨೪೦ ಬಿಲಿಯನ್ ಡಾಲರ್‌ನಷ್ಟು ಕಪ್ಪು ಹಣ ಇಂದು ನಮ್ಮಲ್ಲಿ ಪ್ರವಹಿಸುತ್ತಿದೆ. ಅಮೆರಿಕೆಯಲ್ಲಿ ಇದರ ಪ್ರಮಾಣ $ ೫೦೦ ಬಿಲಿಯನ್, ಇಟಲಿಯಲ್ಲಿ ಇದು $ ೨೨೦ ಬಿಲಿಯನ್, ಜಪಾನಿನಲ್ಲಿ $ ೧೭೫ ಬಿಲಿಯನ್, ಸ್ಪೈನ್‌ನಲ್ಲಿ $ ೧೨೫ ಬಿಲಿಯನ್ ಮತ್ತು ಇಂಗ್ಲೆಂಡಿನಲ್ಲಿ $ ೯೦ ಬಿಲಿಯನ್. ಅಂದರೆ ಭಾರತ ಭ್ರಷ್ಟಾಚಾರದಲ್ಲಿ ಈ ರಾಷ್ಟ್ರಗಳನ್ನು ಹಿಮ್ಮೆಟ್ಟಿಸಿದೆ. ಪ್ರಪಂಚದ ಅತ್ಯಂತ ಭ್ರಷ್ಟ ರಾಷ್ಟ್ರಗಳಲ್ಲಿ ನಮ್ಮದೂ ಒಂದು. ಜಾಗತಿಕ ಮಟ್ಟದಲ್ಲಿ ಭ್ರಷ್ಟಾಚಾರದಲ್ಲಿ ಅತ್ಯಂತ ಎತ್ತರದ ಮಟ್ಟದಲ್ಲಿರುವ ರಾಷ್ಟ್ರಗಳಲ್ಲಿ ನಮ್ಮದೂ ಒಂದಾಗಿದೆ. ಧರ್ಮ ಆಧ್ಯಾತ್ಮಿಕತೆಗಳಿಗೂ ಭ್ರಷ್ಟಾಚಾರದ ದೈನಂದಿನ ಜೀವನಕ್ಕೂ ಸಂಬಂಧವೇ ಇಲ್ಲವಾಗುವಷ್ಟರ ಮಟ್ಟಿಗೆ ಭ್ರಷ್ಟಾಚಾರ ಬೆಳೆದಿದೆ. ಭಾರತದಲ್ಲಿ ಸೃಷ್ಟಿಯಾಗುವ ೧೧.೫೦ ಲಕ್ಷ ಕೋಟಿ ರೂಪಾಯಿಗಳಲ್ಲಿ ಹೆಚ್ಚಿನ ಹಣ ವಿದೇಶೀ ಬ್ಯಾಂಕುಗಳನ್ನು ತಲುಪುತ್ತಿದೆ. ವಿದೇಶದಲ್ಲಿರುವ ಭಾರತದ ಹಣ $ ೧೫೦ ಬಿಲಿಯನ್. ಇದನ್ನು ವಾಪಸ್ಸು ಭಾರತಕ್ಕೆ ತರಬಹುದಾದರೆ, ಇಡೀ ರಾಷ್ಟ್ರದ ರಸ್ತೆಗಳ ನಿರ್ಮಾಣ ಕ್ಷಿಪ್ರವಾಗಿ ಸಾಧ್ಯ.

ನಮ್ಮ ರಾಷ್ಟ್ರದ ರಾಜ್ಯ ಸರ್ಕಾರಗಳು ರಸ್ತೆ ತೆರಿಗೆಯಿಂದ ೮೦೦೦







ಕೋಟಿ ರೂಪಾಯಿಗಳನ್ನು ಸಂಗ್ರಹಿಸುತ್ತಿವೆ. ಆದರೆ ವಿವಿಧ ಇಲಾಖೆಗಳು ಸಂಗ್ರಹಿಸುತ್ತಿರುವ ಲಂಚ ಹಣದ ಮೊತ್ತ ರೂ. ೧೧,೦೦೦ ಕೋಟಿಯೆಂದು ಅಂದಾಜು ಮಾಡಲಾಗಿದೆ. ಆದ್ದರಿಂದ ಸಮಾಜದ ಅತ್ಯಂತ ಹೆಚ್ಚಿನ ಆತಂಕ ಭ್ರಷ್ಟಾಚಾರದ್ದಾಗಿದೆ. ಇದನ್ನು ಎದುರಿಸಲು ಏನು ಮಾಡಬೇಕು ಎನ್ನುವುದು ಈಗ ಎಲ್ಲರ ಮುಂದಿರುವ ಸಮಸ್ಯೆ.

ಜನರ ಆಶೋತ್ತರಗಳನ್ನು ಪೂರೈಸುವ ದೃಷ್ಟಿಯಿಂದ, ಜಾಗತೀಕರಣದ ಹಿನ್ನೆಲೆಯಲ್ಲಿ, ಸರ್ಕಾರ ಅತ್ಯಂತ ಪ್ರಮುಖ ಪಾತ್ರವನ್ನು ವಹಿಸಬೇಕಾಗುತ್ತದೆ. ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರಕ್ಕೆ ಇದು ತುಂಬಾ ಅನಿವಾರ್ಯ. ಜಾಗತೀಕರಣದ ವ್ಯವಸ್ಥೆಯಲ್ಲಿ ಕೇವಲ ಕೆಲವು ವರ್ಗದ ಜನರಿಗೆ ಮಾತ್ರ ತಮ್ಮ ಆಶೋತ್ತರಗಳನ್ನು ಈಡೇರಿಸಿಕೊಳ್ಳುವುದು ಸಾಧ್ಯವಾಗುತ್ತದೆ. ಉಳಿದ ವರ್ಗದವರಿಗೆ ಹೆಚ್ಚಾಗಿ ವಿದ್ಯಾಭ್ಯಾಸ ಕ್ಷೇತ್ರದಿಂದ ವಂಚಿತರಾದವರಿಗೆ, ರೈತಾಪಿ ವರ್ಗದವರಿಗೆ, ಸ್ತ್ರೀಯರಿಗೆ ತಮ್ಮ ಆಶೋತ್ತರಗಳನ್ನು ಈಡೇರಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಅವರ ಆತಂಕಗಳು, ಜೀವನವಿಡೀ ಆತಂಕವಾಗಿಯೇ ಮುಂದುವರಿಯುತ್ತವೆ. ಇಂತಹ ಸಂದರ್ಭದಲ್ಲಿ ಸರ್ಕಾರ ನೇರವಾಗಿ ಆರ್ಥಿಕ ಚಟುವಟಿಕೆಗಳನ್ನು ಪ್ರವೇಶಿಸದಿದ್ದರೂ, ಪರೋಕ್ಷವಾಗಿ ತನ್ನ ಆರ್ಥಿಕ ಜವಾಬ್ದಾರಿಗಳನ್ನು ನಿರ್ವಹಿಸಬೇಕಾಗುತ್ತದೆ. ಈ ವರ್ಗದ ಜನರಿಗೆ ವ್ಯಾಪಕವಾದ ಸಹಾಯಧನ, ದಿನನಿತ್ಯದ ವಸ್ತುಗಳಿಗೆ ಕಡಿಮೆ ಬೆಲೆಯನ್ನು ನಿರ್ಧರಿಸುವುದು, ರೈತರಿಗೆ ಅಗತ್ಯವಾದ ರಸಗೊಬ್ಬರ, ಸಾಲ, ವಿದ್ಯುತ್, ನೀರಾವರಿಗೆ ಸಹಾಯಧನ ನೀಡುವುದು ಮುಂತಾದ ರೀತಿಯಲ್ಲಿ ಸಾಕಷ್ಟು ಕಾಲ ಮುಂದುವರಿಯಬೇಕಾಗುತ್ತದೆ. ಇದಕ್ಕೆ ಅಗತ್ಯವಾದ ಸಂಪನ್ಮೂಲವನ್ನು ಕ್ರೋಢೀಕರಿಸಿಕೊಳ್ಳಬೇಕಾಗುತ್ತದೆ. ಇದಕ್ಕೆ ಅಗತ್ಯವಾದ ರಾಜಕೀಯ ದೃಢ ನಿರ್ಧಾರವನ್ನು ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ಕೈಗೊಳ್ಳಬೇಕಾಗುತ್ತದೆ.

ರಾಷ್ಟ್ರದಲ್ಲಿ ಒಟ್ಟು ರೈತರಲ್ಲಿ ಶೇ. ೫೦ ರಷ್ಟು ಕುಟುಂಬಗಳು ಸಾಲದಲ್ಲಿದ್ದಾರೆ. ಅಂದರೆ ೪೩.೪೨ ದಶಲಕ್ಷ ರೈತಾಪಿ ಕುಟುಂಬಗಳು ಇಂದು ಸಾಲದಲ್ಲಿವೆ. ಆಂಧ್ರ ಪ್ರದೇಶದಲ್ಲಿ ಶೇ. ೮೨ ರೈತಾಪಿ ಕುಟುಂಬಗಳು, ಕರ್ನಾಟಕದಲ್ಲಿ ಶೇ. ೬೧.೬, ಕೇರಳದಲ್ಲಿ ಶೇ. ೬೪.೪, ತಮಿಳುನಾಡಿನಲ್ಲಿ ಶೇ. ೭೪.೫ ಕುಟುಂಬಗಳು ಸಾಲದ ಹೊರೆಯನ್ನು ಹೊರುತ್ತಿವೆ. ಕರ್ನಾಟಕದಲ್ಲಿ ಸಾಲದಲ್ಲಿರುವ ರೈತಾಪಿ ಕುಟುಂಬಗಳನ್ನು ತೆಗೆದುಕೊಂಡರೆ, ರಾಷ್ಟ್ರದಲ್ಲಿ ೪ನೇ ಸ್ಥಾನ ದೊರೆಯುತ್ತದೆ. ಇಂತಹ ಕುಟುಂಬಗಳ ಸಾಲದ ಹೊರೆಯನ್ನು ತಗ್ಗಿಸುವುದಾದರೂ ಹೇಗೆ? ಈ ಕುಟುಂಬಗಳ ಆತಂಕಗಳನ್ನು ನಾವು ಕಲ್ಪಿಸಿಕೊಳ್ಳುವುದೂ ಸಾಧ್ಯವಿಲ್ಲ. ಸರ್ಕಾರ ಆರ್ಥಿಕ ಚಟುವಟಿಕೆಗಳಿಂದ ದೂರ ಸರಿಯುತ್ತಿರುವ ಯುಗದಲ್ಲಿ ಈ ಕುಟುಂಬಗಳ ನೆರವಿಗೆ ಬರುವವರಾದರೂ ಯಾರು, ಎನ್ನುವ ಪ್ರಶ್ನೆ ನಿಜವಾಗಲೂ ಚಿಂತನಾರ್ಹ. ಈ ವರ್ಗ ಮುಂದೆ ಸೃಷ್ಟಿಸಬಹುದಾದ ಆತಂಕಗಳು ನಿಜವಾಗಲೂ ಕಲ್ಪನಾತೀತ!

ರಾಷ್ಟ್ರೀಯ ಮಟ್ಟದಲ್ಲಿ ಸಾಕ್ಷರತೆ ಇನ್ನೂ ಶೇ. ೬೫ರಷ್ಟಿದೆ. ಸ್ತ್ರೀ ಸಾಕ್ಷರತೆ ಶೇ. ೫೪ರಷ್ಟಿದೆ. ಗ್ರಾಮೀಣ ಪ್ರದೇಶಗಳಲ್ಲಿ ಇದು ಶೇ. ೬೭ರಷ್ಟಿದೆ. ಸ್ತ್ರೀ ಸಾಕ್ಷರತೆ ಅರುಣಾಚಲ ಪ್ರದೇಶ, ಬಿಹಾರ, ಜಾರ್ಕಂಡ, ಜಮ್ಮು ಮತ್ತು ಕಾಶ್ಮೀರ, ರಾಜಸ್ತಾನ ಮತ್ತು ಉತ್ತರ ಪ್ರದೇಶ ರಾಜ್ಯಗಳಲ್ಲಿ ಶೇ. ೫೦ಕ್ಕಿಂತ ಕಡಿಮೆ ಇದೆ. ಇಂದಿಗೂ ಸಹ ಶಾಲೆಯನ್ನು ಬಿಟ್ಟು ಹೋಗುವವರ ಪ್ರಮಾಣ ಆತಂಕಕಾರಿಯಾಗಿದೆ. ಪ್ರಾಥಮಿಕ ಮಟ್ಟದಲ್ಲಿ ಇದು ಶೇ. ೪೦.೩ ಆಗಿದೆ. ಮಾಧ್ಯಮಿಕ ಮಟ್ಟದಲ್ಲಿ ಇದು ಶೇ. ೪೦.೩ ಆಗಿದೆ. ಮಕ್ಕಳು ನಾನಾ ಕ್ಷೇತ್ರದಲ್ಲಿ ಕೆಲಸದಲ್ಲಿದ್ದಾರೆ. ಒಟ್ಟು ಮಕ್ಕಳಲ್ಲಿ ಶೇ. ೫.೪ ರಷ್ಟು ಮಕ್ಕಳು ನಾನಾ ರೀತಿಯ ಕೂಲಿ ಕೆಲಸ ಮಾಡುತ್ತಿದ್ದಾರೆ. ಮನೆಯ ಆಳಾಗಿ, ಕಲ್ಲು ಕುಟ್ಟುವವರಾಗಿ, ಗಾರೆ ಕೆಲಸದವರಾಗಿ ಕೆಲಸ ಮಾಡುತ್ತಿರುವ ಮಕ್ಕಳ ಆಶೋತ್ತರಗಳಾದರೂ ಏನು?

ಆತಂಕ ಸಮಾಜದ ನಿರ್ಮಾಣಕ್ಕೆ ನನ್ನ ದೃಷ್ಟಿಯಲ್ಲಿ ಪ್ರಮುಖ ಕಾರಣಗಳಲ್ಲಿ ಒಂದು, ಆರೋಗ್ಯಕ್ಕೆ ಮಹತ್ವವನ್ನು ಕೊಟ್ಟಿಲ್ಲದೇ ಇರುವುದು ಸಹ. ರಾಷ್ಟ್ರೀಯ ಮಟ್ಟದ ಅಂಕಿ ಅಂಶಗಳು ಇದನ್ನು ಬಹುಮಟ್ಟಿಗೆ ಸಾಬೀತು ಮಾಡುತ್ತವೆ. ಉದಾಹರಣೆಗೆ, ಭಾರತದಲ್ಲಿ ಶಿಶುಮರಣ ದರ ೧೦೦೦ಕ್ಕೆ ೭೫. ಅಭಿವೃದ್ಧಿ ಶೀಲ ರಾಷ್ಟ್ರಗಳ ಸರಾಸರಿ ೬೧ಕ್ಕೆ ಹೋಲಿಸಿದರೆ ಇದು ತುಂಬಾ ಹೆಚ್ಚು. ಹಾಗೆಯೇ ಸರಾಸರಿ ಜೀವಿತ ಅವಧಿ ಭಾರತದಲ್ಲಿ ೬೪ ಇದ್ದು, ಇದು ಅಭಿವೃದ್ಧಿಶೀಲ ರಾಷ್ಟ್ರಗಳಿಗಿಂತ ಕಡಿಮೆ. ರಾಷ್ಟ್ರದ ಒಳಗಣ ಚಿತ್ರಣ ಇನ್ನೂ ಭೀಕರ. ಒರಿಸ್ಸಾ, ಮಧ್ಯಪ್ರದೇಶಗಳಲ್ಲಿ ಶಿಶುಮರಣ ದರ ೧೦೦೦ಕ್ಕೆ ಕ್ರಮವಾಗಿ ೧೨೫ ಮತ್ತು ೧೩೩. ಬಡತನದ ಬೇಗೆಯಿಂದಾಗಿ, ಅಪೌಷ್ಟಿಕತೆ ಹೆಚ್ಚಾಗಿದೆ ರಾಷ್ಟ್ರದ ಶೇ. ೧೬.೭ ಜನ ಸ್ತ್ರೀಯರು, ಶೇ. ೫೧.೭ ಮಕ್ಕಳು. ಅಪೌಷ್ಟಿಕತೆಯಿಂದ ನರಳುತ್ತಿದ್ದಾರೆ. ರಾಷ್ಟ್ರದಲ್ಲಿ ೩೪.೪ ದಶಲಕ್ಷ ಜನ ಕ್ಷಯರೋಗ ಹೊಂದಿದ್ದಾರೆ, ಏಡ್ಸ್ ಪೀಡಿತರ ಸಂಖ್ಯೆ ವರ್ಷಪ್ರತಿ ಹೆಚ್ಚಾಗುತ್ತಿದೆ. ಶೌಚತ್ವವನ್ನು ಕಾಪಾಡಿಕೊಳ್ಳಲು ಅನುಕೂಲವಿಲ್ಲದಿದ್ದವರ ಸಂಖ್ಯೆ ಶೇ. ೬೬. ಹುಟ್ಟಿದ ಮಕ್ಕಳಲ್ಲಿ ಶೇ. ೩೬ ಕಡಿಮೆ ತೂಕ ಹೊಂದಿದ್ದರೆ, ಇರುವ ಮಕ್ಕಳಲ್ಲಿ ತಾವು ಇರಬೇಕಾದ ತೂಕಕ್ಕಿಂತ ಶೇ. ೨೪ರಷ್ಟು ಕಡಿಮೆ ತೂಕ ಹೊಂದಿದ್ದಾರೆ. ಇವು ತುಂಬಾ ಆತಂಕಕ್ಕೆಡೆಮಾಡುವ ಲಕ್ಷಣಗಳಾಗಿವೆ.

ಸಮಾಜವನ್ನು ಆತಂಕಕ್ಕೆಡೆ ಮಾಡಿರುವ ಆರ್ಥಿಕ ಕಾರಣಗಳಲ್ಲಿ



ಒಂದು, ಜಾಗತೀಕರಣದ ಫಲವಾಗಿ ನಡೆದಿರುವ ಗ್ರಾಹಕ ಕೇಂದ್ರ ಅಭಿವೃದ್ಧಿ. ಅಭಿವೃದ್ಧಿ ಹೊಂದುತ್ತಿರುವ ಪ್ರತಿ ರಾಷ್ಟ್ರದ ನಾಗರೀಕತೆಯನ್ನೇ ನುಂಗಿ ಹಾಕುವ ಪ್ರಮಾಣದಲ್ಲಿ ಪಾಶ್ಚಾತ್ಯೀಕರಣ ನಡೆಯುತ್ತಿದೆ. ಗ್ರಾಹಕರು ತಮಗೆ ಇಷ್ಟ ಬಂದ ಸರಕನ್ನು ಇಂದು ಆಯ್ಕೆ ಮಾಡಿಕೊಳ್ಳಬಹುದಾದ ಸ್ಥಿತಿ ಇದೆ. ಅದು ಯಾವುದೇ ದೇಶದಿಂದ ಬಂದಿರಬಹುದು ಅಥವಾ ಅನೇಕ ರಾಷ್ಟ್ರಗಳಲ್ಲಿ ಉತ್ಪಾದಿತವಾಗಿರುವ ಬಿಡಿ ಭಾಗಗಳು, ಒಂದು ರಾಷ್ಟ್ರದಲ್ಲಿ ಸಂಯೋಜಿತವಾಗಿರಬಹುದು. ಮಾರುಕಟ್ಟೆಯೇ ಪ್ರಧಾನವಾಗಿರುವ ಸಮಾಜಗಳ ಸೃಷ್ಟಿ, ಸ್ಥಳೀಯ ನಾಗರಿಕತೆಯನ್ನೇ ಅಳಿಸಿ ಹಾಕುತ್ತಿರುವುದರಿಂದ, ಜಾಗತೀಕರಣ ಪ್ರಕ್ರಿಯೆಯನ್ನೇ ಪ್ರಶ್ನಿಸುವುದು ಅನಿವಾರ್ಯವಾಗಿದೆ. ಆದರೆ, ಜಾಗತೀಕರಣವನ್ನು ತಡೆಗಟ್ಟುವುದಾಗಲೀ ವಿಶ್ವದ ಸಂಪನ್ಮೂಲಗಳು ಹಂಚಿಕೆಯಾಗುತ್ತಿರುವ ಕ್ರಮವನ್ನು ವಿರೋಧಿಸುವುದಾಗಲೀ ಸಾಧ್ಯವಿಲ್ಲದ ಮಾತಾಗಿರುವುದು ಅತ್ಯಂತ ಆತಂಕಕಾರೀ ವಿಷಯವಾಗಿದೆ.

ಜಾಗತೀಕರಣದ ಮತ್ತೊಂದು ಸಮಸ್ಯೆ, ಸ್ಥಳೀಯ ಸಂಸ್ಕೃತಿಗಳನ್ನು ಅವು ನಾಟಕ, ನೃತ್ಯ, ಸಂಗೀತ, ಕಲೆಗಳಾಗಬಹುದು – ನಾಶ ಮಾಡುತ್ತಿರುವ ವೇಗ. ಕ್ರಮ ಕ್ರಮವಾಗಿ ಪೌರ್ವಾತ್ಯ ಸಂಸ್ಕೃತಿ ಮತ್ತು ಪಾಶ್ಚಾತ್ಯ ಸಂಸ್ಕೃತಿಗಳ ನಡುವೆ ಭೇದ ಅಳಿದು ಪಾಶ್ಚಾತ್ಯ ಸಂಸ್ಕೃತಿಯೇ ಸಾರ್ವತ್ರೀಕರಣವಾಗುವ ಅಪಾಯಗಳಿವೆ. ಇದಕ್ಕೆ ಪರಿಹಾರವೇನು? ಪರಿಹಾರ ಜನರ ಕೈಯಲ್ಲೇ ಇದೆ. ಪ್ರಜಾಪ್ರಭುತ್ವವಿರುವ ನಮ್ಮಂತಹ ದೇಶದಲ್ಲಿ ಜನರೇ ತಮ್ಮ ನಾಡಿನ ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಮನೋಸ್ಥೈರ್ಯವನ್ನು ತೋರಬೇಕು. ರಾಷ್ಟ್ರ ಸರ್ಕಾರಗಳು ಇದಕ್ಕೆ ನೆರವಾಗಬೇಕು.

ನಮ್ಮ ಸಮಾಜದ ಪ್ರಮುಖ ಆತಂಕಗಳನ್ನು ನಾನು ಚರ್ಚಿಸಿದ್ದೇನೆ. ಇವುಗಳ ಪರಿಹಾರ ಸುಲಭ ಸಾಧ್ಯವಲ್ಲವೆನ್ನುವುದು ನಮಗೆಲ್ಲರಿಗೂ ತಿಳಿದಿದೆ. ಆದರೆ ಆತಂಕಗಳನ್ನು ಉಳಿಸಿಕೊಂಡು ಹೋಗುವ ಸಮಾಜ ಒಂದು ದುರ್ಬಲ ಸಮಾಜವಾಗುತ್ತದೆ. ನಮ್ಮ ಸಂಸ್ಕೃತಿಯಲ್ಲಿ ಪ್ರತಿ ವ್ಯಕ್ತಿಯ ಮನಸ್ಸಿನಲ್ಲೂ ಒಬ್ಬ ಪುಟ್ಟ ಬುದ್ಧ, ಬಸವ, ಅಂಬೇಡ್ಕರ್ ಇದ್ದರೂ ಸಹ, ಅವು ಜಾಗೃತವಾಗದ ಪರಿಸ್ಥಿತಿ ಏರ್ಪಟ್ಟಿದೆ. ಇದನ್ನು ಹೇಗೆ ಜಾಗೃತಗೊಳಿಸಬೇಕು ಎನ್ನುವುದು ಸಹ ಇಂದಿನ ಪ್ರಮುಖ ಸಮಸ್ಯೆಯಾಗಿದೆ. ಪ್ರತಿ ವ್ಯಕ್ತಿಯೂ ಈ ಸಮಸ್ಯೆಗಳಿಗೆ ಸ್ಪಂದಿಸದೆ ಕ್ರಿಯಾಶೀಲನಾಗದೆ ಸಾಮಾಜಿಕ ಬದಲಾವಣೆ ಒಂದು ಅಸಾಧ್ಯವಾದ ಕ್ರಿಯೆಯಾಗಿಯೇ ಉಳಿದು ಹೋಗುವ ಭಯ ಇಂದು ನಮ್ಮೆಲ್ಲರಲ್ಲಿದೆ. ಆದ್ದರಿಂದ ಈ ಆತಂಕಗಳನ್ನು ಒಟ್ಟಾರೆ ಎದುರಿಸಬೇಕಾಗುತ್ತದೆ. ವ್ಯಕ್ತಿಗಳ ಮಟ್ಟದಲ್ಲಿ, ಸಮೂಹದ ಮಟ್ಟದಲ್ಲಿ ಮತ್ತು ಸರ್ಕಾರದ ಮಟ್ಟದಲ್ಲಿ ಇದರ ಚರ್ಚೆ ನಡೆಯಬೇಕಾಗುತ್ತದೆ.

(ಪರಿಷತ್ತು ದಿ. ೪-೫-೨೦೦೫ರಂದು ಶಿವಮೊಗ್ಗದಲ್ಲಿ ಏರ್ಪಡಿಸಿದ್ದ "ಆತಂಕದ ಸಮಾಜದ ನಿರೀಕ್ಷೆಗಳು" ಕುರಿತ ಗೋಷ್ಠಿಯಲ್ಲಿ ಮಂಡಿತವಾದ ಪ್ರಬಂಧ.) ○

ನಾವು ಬದುಕಿನಲ್ಲಿ ಬದುಕನ್ನು ಕಳೆದುಕೊಂಡಿದ್ದೇವೆ. ಜ್ಞಾನದಲ್ಲಿ ಬುದ್ಧಿಯನ್ನು ಕಳೆದುಕೊಂಡಿದ್ದೇವೆ. ಮಾಹಿತಿಯಲ್ಲಿ ಜ್ಞಾನವನ್ನು ಕಳೆದುಕೊಂಡಿದ್ದೇವೆ. ಅಭಿಮಾನದಲ್ಲಿ ಪ್ರೀತಿಯನ್ನು ಕಳೆದುಕೊಂಡಿದ್ದೇವೆ. ಪ್ರಯತ್ನದಲ್ಲಿ ಪ್ರಾಮಾಣಿಕತೆಯನ್ನು ಕಳೆದುಕೊಂಡಿದ್ದೇವೆ.

–ಟಿ.ಎಸ್. ಈಲಿಯಟ್

## ವಿಜ್ಞಾಪನೆ

ಚಿತ್ತ ಎತ್ತೆತ್ತಲೆಳೆದರತತ್ತ ಚಿತ್ತೈಸುತಿಹ ಶಿವನು
ಸಮಚಿತ್ತಳಾಗೆಂದು ಒತ್ತೊತ್ತಿ ಬೆನ್ನ ಬಿತ್ತಿಹನವನು.
ಮತ್ತುಗದ ಹೂವು ನಾನೆಂದು
ಜಾರಿದರು ಬಿಡಲೊಲ್ಲನವನು.
ಎತ್ತಿಕೊಂಬೆನು ಬಾರೆಂದು ಸುತ್ತುತಿಹ ಕೇಳಿರೈ.
ದತ್ತಿಯೂ ನಾನಲ್ಲ ಬೆತ್ತ ಹಿಡಿದವನಾಣೆ.
ಬತ್ತದೇ ಒಡಲ ಸೆರೆ ಬಯಲ ಸೇರಲದೆಂತು ಪೇಳಿರಿ?
ಜತುಗೃಹಕೆನ್ನ ಅಡವಿಟ್ಟ ತೆತ್ತಿಗನ
ಬಿತ್ತ ಸೇರದ ಬಯಕೆ ಇದೆ!
ಜಡದ ಗೊಡವೆಯದಳಿವು ಕಾಣಲು ತತ್ತವಣೆ ನೀವಿತ್ತು
ಎತ್ತಬನ್ನಿರಿ ಶಿವಶರಣರೇ, ಈ ನೆತ್ತ
ಮಲ್ಲಿಕಾರ್ಜುನನ ಹುತ್ತಕ್ಕೆ! ತೇಜ ನಿನದ!

### ಶಬ್ದಾರ್ಥ

ಜತುಗೃಹ = ಅರಗಿನ ಮನೆ
ತೆತ್ತಿಗ = ಬಂಧು, ಹೊಣೆಗಾರ
ತತ್ತವಣೆ = ಉಪಾಯ
ಬಿತ್ತ = ಬಿತ್ತನೆಯ ಬೀಜ
ನತ್ತು = ಮೂಗುತಿ (ಹೆಣ್ಣು)
ಹುತ್ತ = ಹಾವಿನ ವಾಸಸ್ಥಾನ (ಮಲ್ಲಿಕಾರ್ಜುನ ಅಡಗುದಾಣಕ್ಕೆ ಎಂದು ಅರ್ಥೈಸುತ್ತೇನೆ)

–ತೇಜಸ್ವಿನಿದೇವಿ ಅರಸ್, ಬೆಂಗಳೂರು





# ಕಾನೂನು-ಧರ್ಮ-ನ್ಯಾಯ

**ಮಹಾಂತಗೌಡ ಬ. ಬಿರಾದಾರ,** ನ್ಯಾಯಾಧೀಶರು (ಹಿ.ಶ್ರೇ.) ಹಾಗೂ ಮಹಾನಗರದ ನ್ಯಾಯಿಕ ದಂಡಾಧಿಕಾರಿ, ಬೆಂಗಳೂರು

"ಕಾನೂನು ಹಾಗೂ ಧರ್ಮ" ಶ್ರೀಸಾಮಾನ್ಯನಿಗೆ ಎರಡೂ ಒಂದೇ ತೆರನಾಗಿ ತೋರಬಹುದು. ಆದರೆ ಎರಡು ಒಂದೇ ಅಲ್ಲ. ಕಾನೂನು ಅಂದರೆ ಆಡು ಭಾಷೆಯಲ್ಲಿ ಹೀಗೆ ಹೇಳಬಹುದು ಅಥವಾ ವಿವರಣೆ ನೀಡಬಹುದು: ಜೀವನವನ್ನು ಸುವ್ಯವಸ್ಥಿತ ರೀತಿಯಲ್ಲಿ ನಡೆಸಿಕೊಂಡು ಹೋಗಲು ನಾವುಗಳೇ ರಚಿಸಿಕೊಂಡ ಅಥವಾ ಮಾಡಿಕೊಂಡ, ಲಿಖಿತ ಅಥವಾ ಅಲಿಖಿತ ಕಟ್ಟುಪಾಡುಗಳು ಅಥವಾ ನಿಯಮಗಳು. ಆದರೆ ಧರ್ಮ ನಾವುಗಳೇ ರಚಿಸಿಕೊಂಡ ಅಥವಾ ಮಾಡಿಕೊಂಡ ನಿಯಮಗಳಿಗೆ ಅಥವಾ ಕಟ್ಟುಪಾಡುಗಳಿಗಿಂತ ಮೀರಿದ್ದು. ನಾವುಗಳೇ ಮಾಡಿಕೊಂಡ ಅಥವಾ ರಚಿಸಿಕೊಂಡ ನಿಯಮಗಳು, ಶಾಸನಗಳು ಕೆಲವೊಮ್ಮೆ ಧರ್ಮ ಬಾಹಿರ ಆಗಲೂಬಹುದು; ಇರಲೂಬಹುದು.

ಉದಾಹರಣೆಗೆ : ಜೂಜಾಟ ಹಾಗೂ online lottery. ಎಲ್ಲಾ ಜೂಜಾಟಗಳನ್ನು ಕಾನೂನು ನಿಷೇಧಿಸಿರುವುದಿಲ್ಲ. ಉದಾಹರಣೆಗೆ, ರಾಜ್ಯವೇ ಕುದುರೆ ಜೂಜಾಟವನ್ನು ಜಾರಿಯಲ್ಲಿರಿಸಿದೆ. ಆದರೆ ಧರ್ಮದ ದೃಷ್ಟಿಯಲ್ಲಿ ಎಲ್ಲಾ ಜೂಜಾಟಗಳು ನಿಷಿದ್ಧ. ಅಂದರೆ ಕಾನೂನು ಸಮ್ಮತವಿದ್ದದ್ದು ಅಧರ್ಮವಾಗುತ್ತದೆ ಕೆಲವೊಮ್ಮೆ. ಆದರೆ ಧರ್ಮ ಸಮ್ಮತವಲ್ಲದ್ದು ಕಾನೂನು ಸಮ್ಮತವಾಗುವ ಸಾಧ್ಯತೆ ಉಂಟು.

"ಧರ್ಮ" ಅಂದರೆ ತನಗೆ ತಾನೇ ಸಹಾಯ ಮಾಡಿಕೊಳ್ಳುವುದಲ್ಲದೇ ಇತರರಿಗೆ ತೊಂದರೆ ಕೊಡದೆ ಇರುವುದು ಹಾಗೂ ಸಮಾಜಕ್ಕೆ ಉಪಯೋಗಿ ಆಗಿ ಬಾಳುವುದು. ಉದಾಹರಣೆಗೆ, ರಸ್ತೆಯ ಮೇಲೆ ಕಲ್ಲು ಬಿದ್ದು ರಸ್ತೆಯ ಉಪಯೋಗಕ್ಕೆ ಅಡಚಣೆ ಆಗಿದ್ದರೆ ಅದನ್ನು ಬದಿಗಿರಿಸುವುದು ಅಥವಾ ರಸ್ತೆಯಿಂದ ತೆಗೆಯುವುದು. ಇದೇ ಧರ್ಮ. ಧರ್ಮ ಅಂದರೆ ಅದೆಲ್ಲೊ ಪರದೇಶದಲ್ಲಿ ಸಿಗುವ ವಸ್ತು ಎಂಬ ಕಲ್ಪನೆ ಬೇಡ. ಅದು ಎಲ್ಲೆಲ್ಲೂ ಎಲ್ಲರಲ್ಲೂ ಪ್ರಕೃತಿಯಲ್ಲಿ ಉಂಟು. ಧರ್ಮವು ಸೃಷ್ಟಿಯಲ್ಲಿ ಅಂತರ್ಗತವಾಗಿದೆ. ಧರ್ಮವು ಪರೋಪಕಾರಿಯನ್ನಾಗಿಸುತ್ತದೆ ಮನುಷ್ಯನನ್ನು. ತಾನೂ ಬಾಳುವಂತೆ ಹಾಗೂ ಇತರರನ್ನು ಬಾಳಲು ಬಿಡುವಂತೆ ಪ್ರೇರೆಪಿಸುತ್ತದೆ. ಧರ್ಮದಿಂದ ಸಮಾಜದಲ್ಲಿ ಕಾನೂನಿಗಿಂತ ಹೆಚ್ಚಿನ ಶಾಂತಿ ಹಾಗೂ ಸಮಾಧಾನ ಲಭಿಸುವುದು. ಇದನ್ನೇ "ಸರ್ವೇಜನಃ ಸುಖಿನೋಭವಂತು" ಎಂದು ಹೇಳಬಹುದು.

ಕಾನೂನು ಶಿಲೆ; ಆದರೆ ಧರ್ಮ ಶಿಲೆಗೆ ನೀಡುವ ಸಂಸ್ಕಾರವಿದ್ದಂತೆ. ಕಾನೂನು ಮನುಷ್ಯನ ಬಾಹ್ಯರಂಗಕ್ಕೆ ಸೀಮಿತವಾದರೆ ಧರ್ಮವು ಮನುಷ್ಯನ ಅಂತರಂಗಕ್ಕೆ ಹಾಗೂ ಭಾವಕ್ಕೆ ಸಂಬಂಧಿಸಿರುತ್ತದೆ. ಕಾನೂನು ಮನುಷ್ಯನ ದೇಹವಾದರೆ ಧರ್ಮವು ಜೀವಾತ್ಮವಿದ್ದಂತೆ ಅಥವಾ ಚೇತನಶಕ್ತಿ ಇದ್ದಂತೆ.

ನ್ಯಾಯವು ಕಾನೂನು ಹಾಗೂ ಧರ್ಮಸಮ್ಮತವಾಗಿರಬೇಕು. ನ್ಯಾಯವು ಕಾನೂನು ಸಮ್ಮತ ಮಾತ್ರ ಇದ್ದರೆ ಸಾಲದು. ಅದರ ಜೊತೆಜೊತೆಗೆ ನ್ಯಾಯವೂ ಧರ್ಮಸಮ್ಮತವಾಗಿರಬೇಕು. ಆವಾಗ್ಗೆ ಅದನ್ನು ಪರಿಪೂರ್ಣ ನ್ಯಾಯ ಅಥವಾ ನ್ಯಾಯದಾನ ಪದ್ಧತಿ ಎಂದು ಕರೆಯಬಹುದು. ಪರಿಪೂರ್ಣ ನ್ಯಾಯವು ಧರ್ಮಸಮ್ಮತದ ಜೊತೆಗೆ ಸಾಮಾಜಿಕ ನ್ಯಾಯವನ್ನೊಳಗೊಂಡಿರುತ್ತದೆ. ಇದನ್ನೇ ಬೇರೆ ರೀತಿಯಲ್ಲಿ ಹೇಳಬೇಕಾದರೆ ಧರ್ಮವು ಕಾನೂನಿಗಿಂತ ಎಷ್ಟೋ ಪಟ್ಟು ಶ್ರೇಷ್ಠ ಹಾಗೂ ಸೂಕ್ಷ್ಮವಾಗಿರುತ್ತದೆ. ಅಥವಾ ಅತಿ ಸೂಕ್ಷ್ಮವಾಗಿರುತ್ತದೆ. ಅಂತಹ ಧರ್ಮಸಮ್ಮತ ನ್ಯಾಯಾಧಾರದ ಮೇಲೆ ಶರಣ ಸಮೂಹ ಸಮಾಜವನ್ನು ಕಟ್ಟಲು ೧೨ನೇ ಶತಮಾನದಲ್ಲಿ ಜೀವನವಿಡೀ ಶ್ರಮಿಸಿತು. ಪೂಜ್ಯ ಮಹಾತ್ಮಾಗಾಂಧೀಜಿಯವರು ಕಂಡ ಕನಸಿನ ರಾಮರಾಜ್ಯವು ಕೂಡ ಅದೇ ಆಗಿತ್ತು. ಶರಣ ಸಮೂಹದ ಕಲ್ಯಾಣ ವಿಶ್ವಕಲ್ಯಾಣ ರಾಜ್ಯದ ಪರಿಕಲ್ಪನೆಯು ಕೂಡ ಆಗಿತ್ತು ಎಂದರೆ ತಪ್ಪಾಗಲಾರದು. ಕಾರಣ ವಿಶೇಷವಾಗಿ ಶಾಸಕರಿಗೆ, ಸಂಸದರಿಗೆ, ಕಾನೂನು ರೂಪಿಸುವವರಿಗೆ ಹಾಗೂ ಎಲ್ಲರಿಗೂ ಧರ್ಮದ ಜ್ಞಾನ ಅತ್ಯವಶ್ಯ ಅಂದರೆ ಅತಿಶಯೋಕ್ತಿಯಾಗಲಾರದು.

"ನಾನು ಈ ಭೂಮಿ ಮತ್ತು ಅದರ ಮೇಲಿರುವ ಬದುಕಿನಲ್ಲಿ ಎಷ್ಟು ಮುಳುಗಿದ್ದೇನೆಂದರೆ, ಸ್ವರ್ಗ ಮತ್ತು ದೇವತೆಗಳ ಬಗೆಗೆ ಯೋಚನೆ ಮಾಡಲೂ ಸಾಧ್ಯವಿಲ್ಲದಷ್ಟು"

–ಪರ್ಲ್‌ಬಕ್ (೧೮೯೨)

# ವಚನಕಾರ ದಂಪತಿಗಳು

(ಹಿಂದಿನ ಸಂಚಿಕೆಯಿಂದ)



ಡಾ. ರಾಜಶೇಖರ ಇಚ್ಚಂಗಿ
'ಚೈತ್ರ' ವಿವೇಕಾನಂದ ನಗರ, ಹುಕ್ಕೇರಿ, ಜಿ. ಬೆಳಗಾವಿ

**ರಾಯಸದ ಮಂಚಣ್ಣ ಮತ್ತು ರಾಯಮ್ಮ :** ಈತ ಬಸವಣ್ಣನವರ ನಂಬುಗೆಯವ. ಬಸವಣ್ಣನವರ ಓಲೆಗಳನ್ನು ಒಯ್ದು ಇತರರಿಗೆ ಮುಟ್ಟಿಸುವ, ಇತರರಿಂದ ಪಡೆದ ಉತ್ತರಗಳನ್ನು ತಂದು ಅಣ್ಣನವರಿಗೆ ಒಪ್ಪಿಸುವ ಹಿರಿಯ ಕಾಯಕ ಈತನದಾಗಿತ್ತು. ದೇಹ ಕಾಯಕದಲ್ಲಿ ತೊಡಗಿದ್ದರೆ ಮನಸ್ಸನ್ನು ಆಧ್ಯಾತ್ಮದಲ್ಲಿ ತೊಡಗಿಸಿದ್ದ ಹಿರಿಯ ಶರಣ ಹಾಗೂ ಅನುಭಾವಿ. ಈತನು ಮೃದುಭಾಷಿಯೂ ಚಾಣಾಕ್ಷನೂ ಅನುಭಾವಿಯೂ ಆಗಿದ್ದನೆಂದು ಈತನ ವಚನಗಳಿಂದ ಅರಿಯಬಹುದು. ದೊರೆತಿರುವ ಈತನ ವಚನಗಳು ಹತ್ತೇ ಆದರೂ ಅವು ಅರ್ಥಪೂರ್ಣವೂ ಸ್ವಾರಸ್ಯವುಳ್ಳವೂ ಆಗಿವೆ. ಈತನ ವಚನಗಳ ಅಂಕಿತ 'ಜಾಂಬೇಶ್ವರ'. ಈತನ ಪತ್ನಿ ರಾಯಮ್ಮನೂ ಅನೇಕ ವಚನಗಳನ್ನು ರಚಿಸಿದ್ದಾಳೆ. ಇರ್ವರು ಶಿವಾನುಭವಿಗಳಾಗಿದ್ದರೆಂದು ತಿಳಿದುಬರುತ್ತದೆ.

**ಹಡಪದ ಅಪ್ಪಣ್ಣ ಮತ್ತು ಲಿಂಗಮ್ಮ :** ಹಡಪದ ಅಪ್ಪಣ್ಣನವರು ಅನುಭವ ಮಂಟಪದ ಮೇಧಾವಿ ಹಾಗೂ ಬಸವಣ್ಣನವರ ನಿಕಟವರ್ತಿ. ಈತನದು ಹಡಪದ ಕಾಯಕ. ಕಾಯಕನಿಷ್ಠೆ, ಜೀವನ ನಿಷ್ಠೆ ಹಾಗೂ ಸೇವಾನಿಷ್ಠೆಗಳು ಈ ಶರಣನ ವ್ಯಕ್ತಿತ್ವ ವಿಶೇಷಗಳಾಗಿವೆ. 'ಬಸವಪ್ರಿಯ ಚೆನ್ನಬಸವಣ್ಣ' ಎಂಬ ಅಂಕಿತದಿಂದ ೨೨೨ ವಚನಗಳು ಉಪಲಬ್ಧವಾಗಿವೆ. ಅವುಗಳಲ್ಲಿ ಬೆಡಗಿನ ವಚನಗಳು ಅಧಿಕವಾಗಿವೆ. ಇಲ್ಲಿ ಷಟ್‌ಸ್ಥಲ ವಿಷಯವನ್ನು ಪ್ರಮುಖವಾಗಿ ವಿವೇಚಿಸಲಾಗಿದೆ.

*"ಭಾಗ್ಯವುಳ್ಳಾತರಿಗೆ ಭಕ್ತಿಸ್ಥಲವಾಗದು*
*ಇಹಪರವೆಂದು ಕಾಮಿಸುವಾತಂಗೆ ಪ್ರಾಣಲಿಂಗಿಸ್ಥಲವಾಗದು*
*ಪರದಲ್ಲಿ ಪರಿಣಾಮವನರಿಯದಾತಂಗೆ ಶರಣಸ್ಥಲವಾಗದು*
*ಹರುಷವೇ ಹರನಲ್ಲಿ ಲೀಯವಾದಾತಂಗೆ ಐಕ್ಯಸ್ಥಲವಾಗದು*
*ನೆರೆದ ದೇಹವು ಕರ್ಪುರ ಉರಿಗೊಂಡಂತೆ, ಅಲ್ಲದೆ*
*ನಿರವಯಸ್ಥಲವಾಗದು*
*ಇದು ನಮ್ಮ ಬಸವಪ್ರಿಯ ಕೂಡಲ ಚೆನ್ನಬಸವಣ್ಣ"*

ಎಂದಿದ್ದಾನೆ. ಈತನ ಪತ್ನಿ ಲಿಂಗಮ್ಮನು ವಚನಗಾರ್ತಿ ಆಗಿದ್ದು ಆಕೆಯ ೧೧೩ ವಚನಗಳು ಉಪಲಬ್ಧವಾಗಿದ್ದು ಅವುಗಳಲ್ಲಿ ಬೋಧನಾಂಶ ಹೆಚ್ಚಾಗಿದೆ.

**ಹರದಶ್ರೇಷ್ಠಿ ಆದಯ್ಯ ಶೆಟ್ಟಿ :** ಆದಯ್ಯನು ಉರುಳುತ್ತ ಹೋಗಿ, ಸೌರಾಷ್ಟ್ರ ಮುಟ್ಟಿ, ಸೋಮನಾಥನು ಬಂದು ಪುಲಿಗೆರೆಯಲ್ಲಿ ನೆಲಸುವಂತೆ ಪ್ರಾರ್ಥನೆ ಮಾಡಿದ. ಆತನ ಪ್ರಾರ್ಥನೆಗೆ ಒಲಿದು, ಇಪ್ಪತ್ತೊಂದನೆಯ ದಿವಸಕ್ಕೆ ಶಿವ ಸ್ಥಾವರಲಿಂಗದ ರೂಪದಲ್ಲಿ ಪುಲಿಗೆರೆಯ ಸುರಹೊನ್ನೆ ಬಸದಿಯಲ್ಲಿ ನೆಲೆಸಿರುವುದಾಗಿಯೂ ಆದಯ್ಯನು ಸೌರಾಷ್ಟ್ರದಿಂದ ಊರಿಗೆ ತಿರುಗಿ ಬರುವವರೆಗೂ ಅವನ ಹೆಂಡತಿಯಾದ ಪದ್ಮಾವತಿಯು ಉಪವಾಸವಿದ್ದಳು ಎಂದೂ ಕಥೆ ಬರುತ್ತದೆ. ಈ ಪವಾಡಸದೃಶ ಕಥೆಯನ್ನು ಅಲ್ಲಗಳೆದರೂ ಅತ್ಯಂತ ಧರ್ಮಾಭಿಮಾನಿಯಾದ ಆದಯ್ಯ ಶೆಟ್ಟಿ ಪುಲಿಗೆರೆಯಲ್ಲಿ ಜಿನಬಸದಿಯನ್ನು ಕೆಡಿಸಿ, ಶಿವದೇವಾಲಯವನ್ನಾಗಿ ಮಾಡಿದ್ದಕ್ಕೆ ಶಾಶನಾಧಾರವೂ ಇದೆ. ಸ್ವಯಂ ಆದಯ್ಯ ಶೆಟ್ಟಿಯ ವಚನಾಧಾರವೂ ಇದೆ. ಇದರಿಂದ ಸೌರಾಷ್ಟ್ರ ಸೋಮೇಶ್ವರನೇ ಪುಲಿಗೆರೆಗೆ ಬಂದು ನೆಲಸಿದನೆಂಬುದು ಸ್ಪಷ್ಟವಾಗುತ್ತದೆ.

**ಅಮುಗಿದೇವಯ್ಯ :** 'ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ'ದಲ್ಲಿ ಅಮುಗಿದೇವಯ್ಯನ ಕಥೆ ಬರುತ್ತದೆ. ಅದರ ಪ್ರಕಾರ ಸೊನ್ನಲಾಪುರಕ್ಕೆ ಸಿದ್ಧರಾಮನು ಒಡೆಯನಾಗಿದ್ದಾಗ ಅಮುಗಿದೇವನು ಅಲ್ಲಿ ನೆಯ್ಗೆ ಕಾಯಕದಿಂದ ಜೀವನ ನಡೆಸುತ್ತಿದ್ದನು ಇವನ ಹೆಂಡತಿ ವರದಾನಿಯಮ್ಮ. ಈ ದಂಪತಿಗಳು ತಾವು ಗಳಿಸಿದುದರಲ್ಲೇ ಜಂಗಮ ದಾಸೋಹ ಮಾಡುತ್ತಾ ಕಾಲಯಾಪನೆ ಮಾಡುತ್ತಿದ್ದರು. ಹೀಗಿರಲು ಒಮ್ಮೆ ಕಪಿಲಸಿದ್ಧ ಮಲ್ಲಿಕಾರ್ಜುನನ ಪರ್ವಕ್ಕೆ ೧೦ ಕೊಳಗ ಬತ್ತ ಕುಟ್ಟಲು ಸಿದ್ಧರಾಮಯ್ಯನು ಬಿಟ್ಟಿ ಕೊಟ್ಟಣ (ಭತ್ತ)ವನ್ನು ಆಮುಗಿದೇವಯ್ಯನಿಗೂ ಕಳುಹಿಸಿದನು. ಆದರೆ ಅಮುಗಿದೇವಯ್ಯನು ಸ್ಥಾವರ ಲಿಂಗವನ್ನು ಪೂಜಿಸುವವರಿಗೆ ತಾನೇಕೆ ಕೊಟ್ಟಣ (ಭತ್ತ) ಕುಟ್ಟಬೇಕು, ಎಂದುಕೊಂಡು ಅದನ್ನು ತಿಪ್ಪೆಗೆರಚಿದನು. ಇದರಿಂದ ಕೋಪಗೊಂಡ ಸಿದ್ಧರಾಮ ಅವನಿಗೆ ಊರಿನಿಂದ ಹೊರಗೆ ಹೋಗುವಂತೆ ಆಜ್ಞೆ ಮಾಡಿದನು. ಆಗ ಅಮುಗಿದೇವ ತನ್ನ





ಸಾಮಾನನ್ನೆಲ್ಲ ಮೂರು ಮೂಟೆ ಕಟ್ಟಿ ಒಂದನ್ನು ತಾನು ಹೊತ್ತುಕೊಂಡು, ಮತ್ತೊಂದನ್ನು ತನ್ನ ಹೆಂಡತಿಗೆ ಹೊರಿಸಿ, ಮತ್ತೊಂದನ್ನು ಶಿವನು ಹೊತ್ತುಕೊಂಡು ಹೋಗಿ ಒಂದು ಗಾವುದ ದೂರದಲ್ಲಿದ್ದ ಶಿವಪುರದಲ್ಲಿಳಿಸಿ ಬಂದನೆಂದು ತಿಳಿದುಬರುತ್ತದೆ. ಹೀಗೆ ರಾಯಮ್ಮನು ಕೂಡ ಪತಿ ಕೈಕೊಳ್ಳುವ ಶಿವಾನುಭವ ಕಾರ್ಯಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಳೆಂದು ತಿಳಿದುಬರುತ್ತದೆ.

ಗುಪ್ತಮಂಚಣ್ಣನು ವೇದವೇಧಾರಿತಗಳನ್ನು ಅವಲೋಕಿಸುತ್ತಿದ್ದಾಗ, ಶಿವಭಕ್ತಿಯ ಮಹತ್ವ ಮನದಟ್ಟಾಗಲು ವೈಷ್ಣವ ಧರ್ಮವನ್ನು ತ್ಯಜಿಸಿ, ವೀರಶೈವ ಆಚಾರಗಳನ್ನು ಅಳವಡಿಸಿಕೊಳ್ಳುತ್ತಾನೆ. ವೈಷ್ಣವರಿಗೆ ಹೆದರಿ ಮನೆಯಲ್ಲಿಯೇ ದಂಪತಿಗಳು ಗುಟ್ಟಾಗಿಯೇ, ಶಿವಪೂಜೆಯನ್ನು ಆಚರಿಸುತ್ತಾರೆ. ಪ್ರತಿರಾತ್ರಿ ಹೀಗೆ ಷಟಸ್ಥಲಾನುಸಾರ ರಹಸ್ಯವಾಗಿ ಇಷ್ಟಲಿಂಗ ಪೂಜೆ ಮಾಡುತ್ತಿದ್ದ ಮಂಚಣ್ಣ, ವೀರವೈಷ್ಣವನೆಂದೇ ಕಲ್ಯಾಣದ ಜನರು ನಂಬಿದ್ದರು. ಆದರೆ ಒಂದು ರಾತ್ರಿ ಮಂಚಣ್ಣನ ಮನೆಯ ಮಾಳಿಗೆಯ ಮೇಲಿನ ಕಿಂಡಿಯಿಂದ ಧೂಪದ ಹೊಗೆ ಬರುತ್ತಿದ್ದುದನ್ನು ಗಮನಿಸಿದ ಒಬ್ಬ ವೈಷ್ಣವ ಅನುಮಾನದಿಂದ ಕಿಂಡಿಯಿಂದ ಇಣುಕಿ ನೋಡಿದ. ಮಂಚಣ್ಣ ದಂಪತಿಗಳು ಶಿವಪೂಜೆ ನಿರತರಾಗಿರುವುದನ್ನು ಕಂಡು ಗುಟ್ಟು ರಟ್ಟಾಯಿತು. ಆಗ ವ್ಯಥೆಯಿಂದ ಮಂಚಣ್ಣ ದಂಪತಿಗಳು ಸಮಾಧಿಸ್ಥರಾಗುತ್ತಾರೆ.

ಕೋವೂರು ಬ್ರಹ್ಮಯ್ಯನು ರಾಜಧಾನಿಯನ್ನು ಬಿಟ್ಟು ಕೆಲಕಾಲ ಏಕಾಂತ ವಾಸದಲ್ಲಿದ್ದನು. ಆಗ ಅವನ ಮಗನನ್ನು ಕೊಂದು ಹಾಕಿದರು. ಆದರೂ ಅವನ ತಾಯಿಯಾದ ಕಳಾವತಿಯೂ ತನ್ನ ಪತಿಯ ಅಪ್ಪಣೆಯಂತೆ ರಾಜ್ಯಾಭಾರ ನಡೆಸುತ್ತ ಬಂದಳು. ತಂಗಟೂರ ಮಾರಯ್ಯನು ಹನ್ನೆರಡು ವರ್ಷ ಬಸವೇಶ್ವರನ ಸೇವೆ ಮಾಡುತ್ತ ತನ್ನ ಮನೆಗೆ ಬಾರದಿದ್ದರೂ ಅವನ ಹೆಂಡತಿಯು ಅವನಿಗೆ ಯಾವ ತೊಂದರೆ ಕೊಡದೆ ಶಿವಾನುಭವದಂತೆ ನಡೆಯುತ್ತ ಪ್ರಾಣಲಿಂಗ ಸ್ಥಲವನ್ನು ಹೊಂದಿದಳು. ನಿರ್ಲಜ್ಜ ಶಾಂತಯ್ಯನಿಗೆ ದಿಗಂಬರನಾಗುವ ಪ್ರಸಂಗ ಬಂದಾಗ, ಅವನ ಹೆಂಡತಿಯೂ ಕೂಡ ದಿಗಂಬರೆಯಾಗಲು ಸಿದ್ಧಳಾದಳು. ಸಗರದ ಬ್ರಹ್ಮನು ಪ್ರಸಾದವೇ ಮದ್ದೆಂದು ಭಾವಿಸಿ ನಡೆಯಲ್ಲಿ ತಪ್ಪಲು ಅವನ ಹೆಂಡತಿಯಾದ ಶಿವದೇವಿಯು ಅವನನ್ನು ಎಚ್ಚರಿಸಿದಳು. ಮಾದಾರ ಚೆನ್ನಯ್ಯನ ಲಿಂಗಾರ್ಪಿತ ಕಾರ್ಯಗಳಲ್ಲಿ ಅವನ ಹೆಂಡತಿಯು ಸಕ್ರಿಯವಾಗಿ ಭಾಗವಹಿಸಿದ್ದಳು. ಅಗ್ಗವಣಿಯ ಹೊನ್ನಯ್ಯನ ವ್ರತವು ತಪ್ಪಲು ಅವನ ಹೆಂಡತಿಯು ಓಲೆಯ ಶಾಂತಯ್ಯನ ಮೊರೆಹೋಗಬೇಕೆಂದು ಅವನಿಗೆ ಉಪದೇಶ ಮಾಡಿದಳು. ಬಸವಣ್ಣನು ಹಡಪದ ಅಪ್ಪಣ್ಣನವರ ಮುಂದೆ ನೀಲಾಂಬಿಕೆಗೆ 'ಲಿಂಗೈಕ್ಯ ಹೊಂದಲು ಕೂಡಲ ಸಂಗಮಕ್ಕೆ ನಡೆ' ಎಂದು ಹೇಳಿ ಕಳುಹಿಸಿದಾಗ, *'ಅಲ್ಲಿ ಇಹ ಸಂಗಮನಾಥನು ಇಲ್ಲಿ ಇರಲಾರನೆ?'* ಎಂದು ಬಸವಣ್ಣನವರಿಗೆ ಬುದ್ಧಿ ಹೇಳಿದ ನೀಲಾಂಬಿಕೆಯ ಜಾಗೃತ ಪ್ರಜ್ಞೆ ನಿಜವಾಗಿಯೂ ಮೆಚ್ಚುವಂಥದ್ದು.

ಹೀಗೆ ೧೨ನೆಯ ಶತಮಾನದಲ್ಲಿ ಆಗಿಹೋದ ಶಿವಶರಣೆಯರು (ವಚನಕಾರ್ತಿಯರು) ಶಿವಾನುಭವಿಗಳಾಗಿ ಶಿವಾನುಭವಗೋಷ್ಠಿಗಳಲ್ಲಿ ಭಾಗವಹಿಸಿದ್ದರು. ಪತಿ ದಾರಿತಪ್ಪಿದಾಗ ಅವರನ್ನು ಸನ್ಮಾರ್ಗಕ್ಕೆ ಹಚ್ಚಿದ ಶ್ರೇಯಸ್ಸು ವಚನಕಾರ್ತಿಯರದ್ದಾಗಿದೆ. ಶರಣಧರ್ಮದ ಸ್ತ್ರೀಯರು (ವೀರಶೈವರು) ಅವಿವಾಹಿತರಾಗಿ ಉಳಿಯಬಹುದು. ಶರಣ ಧರ್ಮದ ಪ್ರಕಾರ ಪುರುಷರಷ್ಟೇ ಸ್ವಾತಂತ್ರ್ಯ ಸ್ತ್ರೀಯರಿಗೂ ಇದೆ. ಅವರೂ ಕೂಡ ಲಿಂಗಧಾರಣೆ ಮಾಡಿಕೊಳ್ಳುವುದರಿಂದ ತಮ್ಮ ಸಾಮರ್ಥ್ಯ ದಿಂದಲೇ ಮೋಕ್ಷವನ್ನು ಹೊಂದಲು ಅವಕಾಶವಿದೆ.

ಬ್ರಾಹ್ಮಣ ಧರ್ಮದಲ್ಲಿರುವಂತೆ ಅವರು ಮೋಕ್ಷವನ್ನು ಹೊಂದುವಲ್ಲಿ ತಮ್ಮ ಪತಿಗಳ ಕ್ರಿಯೆಗಳನ್ನು ಅವಲಂಬಿಸಿರುವುದಿಲ್ಲ. ಕಾರಣ ವೀರಶೈವ ಸ್ತ್ರೀಯರು ಮುಕ್ತಿ ಹೊಂದಲು ಲಗ್ನವಾಗಬೇಕೆಂಬ ನಿರ್ಬಂಧ ಇರುವುದಿಲ್ಲ. ಅವಳು ಲಗ್ನವಾಗುವುದು ಅವಳ ಇಚ್ಛೆಯ ಮೇಲೆ ಅವಲಂಬಿಸಿರುತ್ತದೆ. ಆದ್ದರಿಂದ ಅನೇಕ ಸ್ತ್ರೀಯರು ಅವಿವಾಹಿತರಾಗಿಯೇ ಉಳಿದಿದ್ದಾರೆ.

ಶಿವಶರಣೆಯಾದ ಅಕ್ಕಮಹಾದೇವಿ ಕೊನೆಯುವರೆಗೂ ಅವಿವಾಹಿತಳಾಗಿಯೇ ಉಳಿದಳು ಎಂದು ಚಾಮರಸ, ನಂತರದ ಶೂನ್ಯ ಸಂಪಾದನಾಕಾರರು, ವಿರೂಪಾಕ್ಷ ಪಂಡಿತ, ಎಳಂದೂರು ಹರೀಶ್ವರ, ರಾಚಕವಿ ಮುಂತಾದವರು ಹೇಳಿದ್ದಾರೆ. ಎಚ್. ತಿಪ್ಪೇರುದ್ರಸ್ವಾಮಿ, ಆರ್. ಸಿ. ಹೀರೇಮಠ ಮೊದಲಾದ ಈಚಿನ ಲೇಖಕರು ಇದೇ ನಿಲುವನ್ನು ತಾಳಿದ್ದಾರೆ. ಆಕೆಯ ವಚನಗಳಲ್ಲಿ ಮಲ್ಲಿಕಾರ್ಜುನನನ್ನೇ ಆಕೆಯ ಪತಿಯೆಂಬುದೂ 'ಮಿಕ್ಕ ಲೋಕದ ಗಂಡರ' ಸಂಬಂಧ ಆಕೆಗಿರಲಿಲ್ಲ ಎಂಬುದೂ ಸ್ಪಷ್ಟವಾಗಿದೆ. ಕಾಶ್ಮೀರದೇಶದ ರಾಜಕುಮಾರಿಯಾದ ಬೊಂತಾದೇವಿಯನ್ನು ಅನೇಕ ದೇಶದ ರಾಜಕುಮಾರರು ಅವಳನ್ನು ವರಿಸಲು ಮುಂದೆ ಬಂದಾಗ, ಅವಳು ಯಾರನ್ನೂ ಲಗ್ನವಾಗದೆ ಕಲ್ಯಾಣ ಪಟ್ಟಣದಲ್ಲಿಯೇ ಅವಿವಾಹಿತಳಾಗಿಯೇ ಉಳಿದಳು ಎಂದು ಅವಳ ಜೀವನ ಚರಿತ್ರೆಯಿಂದ ತಿಳಿದುಬರುತ್ತದೆ.

ಗೊಗ್ಗವ್ವೆಯ ತಾಯಿ ತಂದೆಗಳು ಅವಳು ಲಗ್ನವಾಗಬೇಕೆಂದು ಇಚ್ಛಿಸಿದ್ದರು. ಆದರೆ ಅವಳು ಲಗ್ನವಾಗುವುದನ್ನು ನಿರಾಕರಿಸಿ ಕೊನೆಯವರೆಗೂ ಹಾಗೆಯೇ ಉಳಿದಳು ಎಂದು ಅವಳ ಜೀವನ ಚರಿತ್ರೆಯಿಂದ ತಿಳಿದುಬರುತ್ತದೆ.

ವರದಾನಿ ಗುಡ್ಡವ್ವೆಯು ಕಲ್ಯಾಣ ಪಟ್ಟಣದಲ್ಲಿರುವವರೆಗೆ ಲಗ್ನವಾಗದೆ ಇದ್ದಳು. ಆದರೆ ಅವಳು ತನ್ನ ಗ್ರಾಮಕ್ಕೆ ಹೋದ ನಂತರ ಸಂಗಮನಾಥನನ್ನು ವರಿಸಿದಳು ಎಂದು ಅವಳ ಜೀವನ ಚರಿತ್ರೆಯಿಂದ ತಿಳಿದುಬರುತ್ತದೆ.

ಹೀಗೆ ಶರಣಧರ್ಮ (ಲಿಂಗಾಯತ)ದಲ್ಲಿ ಸ್ತ್ರೀಯರಿಗೆ ಸ್ವತಂತ್ರಾಧಿಕಾರ ಇರುವುದರಿಂದ ಅವಳು ಲಗ್ನವಾಗುವುದು ಅಥವಾ ಬಿಡುವುದು ಅವಳ ಇಚ್ಛೆಯ ಮೇಲೇ ಇದೆ ಇದರಲ್ಲಿ ಯಾವ ದೋಷವೂ ಇರುವುದಿಲ್ಲ.

**ಸ್ತ್ರೀಯರು ಕಾಯಕ ಮಾಡತಕ್ಕದ್ದು** : ಶರಣ ಧರ್ಮದ ಪ್ರಕಾರ ಶಿವಶರಣರ ಕಾಯಕ ತತ್ವಗಳು ಶರಣೆಯರಿಗೂ ಅನ್ವಯಿಸುತ್ತವೆ. ಶಿವಾನುಭವದ ಪ್ರಕಾರ ಸ್ತ್ರೀಯರಿಗೆ ಸ್ವತಂತ್ರಾಧಿಕಾರವಿರುವುದರಿಂದ ಕೆಲವೊಂದು ಉದ್ಯೋಗಗಳನ್ನು ಕೈಕೊಂಡು ಉಪಜೀವನ ನಡೆಸುತ್ತ ದಾಸೋಹಿಗಳಾಗಿ ಬದುಕಿದ್ದಾರೆ.

ಅಮ್ಮವ್ವೆಯು (ಬ್ರಾಹ್ಮಣೆಯು) ಚಿಕ್ಕ ವಯಸ್ಸಿನಲ್ಲಿಯೇ ತಂದೆ-ತಾಯಿಗಳನ್ನು ಕಳೆದುಕೊಂಡು ಅನಾಥಳಾದಳು. ಆದರೆ ಅವಳು ಭಿಕ್ಷೆಬೇಡದೆ ರಾಟಿಯ ಕಾಯಕವನ್ನು ಕೈಕೊಂಡಳು. ಕದಿರೆ ರೆಮ್ಮವ್ವೆಯು ನೂಲುವ ಕಾಯಕವನ್ನು ಕೈಕೊಂಡಳು. ಅಣ್ಣಲದೇವಿಯು ಬೆರಣಿ (ಕುಳ್ಳು)ಗಳನ್ನು ಆಯುವ ಕಾಯಕವನ್ನು ಕೈಗೊಂಡಿದ್ದಳು. ಏಲೇರಿಯ ಅಮ್ಮವ್ವೆಯು ಒಕ್ಕಲುತನ ಮಾಡುತ್ತಿದ್ದಳು.

ಒಂದು ವೇಳೆ ಇಂಥ ಕಾಯಕಗಳು ಸ್ತ್ರೀಯರಿಗೆ ಕಷ್ಟವಾದಲ್ಲಿ ಅವರು ತಮಗೆ ಸುಲಭವಾದ ಬೇರೊಂದು ಕಾಯಕವನ್ನು ಮಾಡಬಹುದು. ಉದಾ - ಸತ್ಯಕ್ಕನು ಶಿವಭಕ್ತರ ಮನೆಗಳಿಗೆ ಹೋಗಿ, ಅವುಗಳನ್ನು ಉಡುಗಿ ಸಮ್ಮಾರ್ಜನೆಯನ್ನು ಮಾಡುವಳು. ಸೇವಿಕೆಯಾದ ಗೌರವ್ವೆಯು ಕೂಟಗಳಿಗೆ ಹೋಗಿ, ಅಲ್ಲಿಗೆ ಬಂದ ಸ್ತ್ರೀ - ಪುರುಷರಿಗೆ ದಾರಿಯನ್ನು ತೋರಿಸಿ, ಅವರವರ ಸ್ಥಾನಗಳಲ್ಲಿ ಕುಳ್ಳಿರಿಸುವಳು. ತೊಂಗಿನ ಮಹಾದೇವಿಯು ಬೆಳಗಿನಲ್ಲೆದ್ದು ಭಕ್ತರನ್ನು ಎಚ್ಚರಿಸಿ ಅವರವರ ನಿತ್ಯದ ಕಾಯಕಕ್ಕೆ ತೊಡಗಿಸುವಳು. ಹೀಗೆ ಶಿವಶರಣರ ಕಾಲದಲ್ಲಿ ಸ್ತ್ರೀಯರು ಅನೇಕ ವಿಧವಾದ ಕಾಯಕದಲ್ಲಿ ತೊಡಗಿರುವುದು ಅವರ ಜೀವನ ಚರಿತ್ರೆಗಳಿಂದ ತಿಳಿದುಬರುತ್ತದೆ.

ಕೆಲವು ಶಿವಶರಣೆಯರು ವಿದ್ವಾಂಸರಿದ್ದು ಅವರು ತಮ್ಮ ವಿದ್ವತ್ತಿನ ಉಪಯೋಗವನ್ನು ಇತರರಿಗೆ ಮಾಡಿಕೊಡುವ ಕಾಯಕವನ್ನು ಕೈಗೊಂಡಿದ್ದರು. ಉದಾ - ವೀರದೇವಮ್ಮನು ಶಿವಾನುಭವ ಶಾಸ್ತ್ರದಲ್ಲಿ ಪಾರಂಗತಳಾಗಿ, ಶಿವಶರಣರ ವಚನಗಳನ್ನು ದಿನಾಲು ಮೂರು ಹೊತ್ತು ಸ್ತ್ರೀಯರಲ್ಲಿ ಓದಿ ಹೇಳುವ ಕಾಯಕವನ್ನು ಮಾಡುತ್ತಿದ್ದಳು. ಇದರಿಂದ ಅವಳಿಗೆ 'ಉಗ್ಗಡಿಸುವ ಕನ್ನೆ ವೀರಾದೇವಿ' ಎಂಬ ಹೆಸರು ಬಂದಿತು ಶಿವಮಹಾದೇವಿಯು ದಿನಾಲು ಸ್ತ್ರೀಯರಿದ್ದಲ್ಲಿಗೆ ಹೋಗಿ ಶಿವಶರಣರ ಚರಿತ್ರೆಗಳಿದ್ದ ಪುರಾಣಗಳನ್ನು ಓದಿ ಹೇಳುವಳು. ವಿಮಳಾದೇವಿಯು ದಿನಾಲು ಸ್ತ್ರೀಯರಿದ್ದಲ್ಲಿಗೆ ಹೋಗಿ ಶಿವಶರಣರ ಚರಿತ್ರೆಗಳಿದ್ದ ಪುರಾಣಗಳನ್ನು ಓದಿ ಹೇಳುವಳು. ವಿಮಳಾದೇವಿಯು ತನ್ನ ಶಿವಾನುಭವವನ್ನು ಇತರ ಸ್ತ್ರೀಯರಿಗೆ ಬೋಧಿಸಿ ಅವರಿಗೆ ಸುಜ್ಞಾನ ದೀಕ್ಷೆಯನ್ನು ಕೊಡುವಳು. ಹೀಗೆ ಶಿವಶರಣರ ಕಾಲದಲ್ಲಿ ಸ್ತ್ರೀಯರು ಅನೇಕ ವಿಧವಾದ ಕಾಯಕಗಳನ್ನು ಕೈಕೊಂಡು ಸಮಾಜದ ಆರ್ಥಿಕ ವ್ಯವಸ್ಥೆಯ ಭದ್ರತೆಗೆ ಕಾರಣರಾಗಿದ್ದಾರೆ.

**ಮನೆತನದ ಆಸ್ತಿಯಲ್ಲಿ ಸ್ತ್ರೀಯರಿಗೆ ಭಾಗ** : ಸ್ತ್ರೀಯರು ಕಾಯಕವನ್ನು ಮಾಡಿಕೊಂಡು ತಮಗೆ ದೊರೆತದ್ದನ್ನು ದಾಸೋಹ ಕಾರ್ಯಗಳಿಗೆ ಬಳಸುವವರು. ಆದ್ದರಿಂದ ಅವರು ದುಡಿದದ್ದು ಅವರಿಗೆ ಸಲ್ಲತಕ್ಕದ್ದು. ಇದು ಧರ್ಮಾಚರಣೆಗೆ ಸಮ್ಮತವಾದುದು. ಸ್ತ್ರೀಯರು ಮನೆಯಲ್ಲಿದ್ದರೂ ಕೂಡ ಶ್ರಮಪಟ್ಟು ಗಳಿಸಬೇಕು. ಒಂದು ವೇಳೆ ಮನೆಯಲ್ಲಿದ್ದವರು ಸಾಮೂಹಿಕವಾಗಿ ದುಡಿಯುತ್ತಲಿದ್ದರೆ, ಅದರಲ್ಲಿ ಅವಳು ಅವರಿಗೆ ಸಹಾಯಕವಾಗಬೇಕು. ಹೀಗೆ ಸಹಾಯವಾಗಿ ಎಲ್ಲರೂ ದುಡಿದದ್ದರಲ್ಲಿ ಅವಳು ತನ್ನ ಭಾಗವನ್ನು ತೆಗೆದುಕೊಂಡು ಅದರ ಮೂಲಕ ದಾಸೋಹ ಕಾರ್ಯಗಳನ್ನು ಮಾಡತಕ್ಕದ್ದು. ಶಿವಶರಣರಾದ ಸ್ತ್ರೀ ಪುರುಷರು ಸಮಾನಾಧಿಕಾರವುಳ್ಳವರಾದ್ದರಿಂದ ಅವರಿಗೆ ಸಲ್ಲತಕ್ಕ ಭಾಗವು ಪುರುಷರಿಗೆ ಇರುವಷ್ಟೇ ಇರುತ್ತದೆ. ಇದೇ ಶಿವಾನುಭವದ ಸರಿಯಾದ ಆಚರಣೆಯು. ಇದು ಶಿವಶರಣೆಯಾದ ಶಿವಪ್ರಿಯನಾಚಿಯ ಚರಿತ್ರೆಯಿಂದ ತಿಳಿದುಬರುತ್ತದೆ.

**ಆಕರ ಗ್ರಂಥಗಳು**

ಸ್ತ್ರೀಯರು, ೨೯೭-೩೦೩

೧. ಹಳಕಟ್ಟಿ ನುಡಿ ಪುರುಷ : ಸಂ. : ಶಾಂತರಸ, (ಪ್ರಥಮ ವಿಶ್ವಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ - ೧೦),ಕರ್ನಾಟಕ ಸರ್ಕಾರ ೧೯೮೩

೨. ಕನ್ನಡ ಅಧ್ಯಯನ ಸಂಸ್ಥೆಯ 'ಕನ್ನಡ ಸಾಹಿತ್ಯ ಚರಿತ್ರೆ' ಸಂಪುಟ - ೪, ಪ್ರ. ಸಂ : ಡಾ. ಹಾ. ಮಾ. ನಾಯಕ. ೧೯೭೭

೩. ಸಮಗ್ರ ವಚನ ಸಂಪುಟ -೬-೯. ಸಂಕೀರ್ಣ, ವಚನ ಸಂಪುಟ - ೧. ಸಂ : ಡಾ. ಎಂ. ಎಂ. ಕಲಬುರ್ಗಿ, ಪ್ರ : ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೪. ಅರಿವು - ಆಚಾರ: ಪುಟ - ೬೩, ಲೇ : ಶ್ರೀ ಬಿ. ಮಹಾದೇವಪ್ಪ ಪ್ರ : ಅರಿವು ಆಚಾರ ಪ್ರಕಟನಾಲಯ, ಯಾದಗಿರಿ.

೫. ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ - ಕಾಳವ್ವೆ - ೪೯. ಸಂಸ್ಕೃತಿಶೋಧ ಲೇ : ಡಾ. ರಾಜಶೇಖರ ಇಚ್ಚಂಗಿ, ಪ್ರ : ಅಕ್ಕಮಹಾದೇವಿ ಪ್ರಕಾಶನ, ಹುಕ್ಕೇರಿ, ೨೦೦೩ ○





# ಅಖಂಡ ಜ್ಯೋತಿ: ಎನ್ನಣ್ಣ ಜಗದಣ್ಣ ಬಸವಣ್ಣ

೮೦೦ ವರ್ಷಗಳ ಹಿಂದಿನ ಮಾತು. ಅದು ೧೨ನೆಯ ಶತಮಾನ. ಮೂಢನಂಬಿಕೆಯೆಂಬ ಸಾಮಾಜಿಕ ಪಿಡುಗಿಗೆ ಬಲಿಯಾಗಿದ್ದ ಕಾಲ. ಹೆಣ್ಣು ಮಗಳು ಹೊಸ್ತಿಲಿನ ಹೊರಗೆ ಕಾಲಿಡಲೂ ಸ್ವಾತಂತ್ರ್ಯವಿರದಿದ್ದ ಕಾಲ. ಜಾತಿ-ವರ್ಣ ವ್ಯವಸ್ಥೆಗಳು ಎದ್ದೆದ್ದು ಕುಣಿದ ಕಾಲ. ಅಂದು ಬಸವಣ್ಣ ಪುಟ್ಟ ಬಾಲಕ.

ಕಲ್ಲನಾಗರಕ್ಕೆ ಹಾಲೆರೆದು, ನಿಜದ ನಾಗರ ಕಂಡು ಬೆದರಿ ಕೊಂದ ಜನರನ್ನು ಕಂಡು ಈ ಬಾಲಕ ಚಿಂತಾಕ್ರಾಂತನಾದ. ಹರಕೆಯ ಹೋತದ ಆಕ್ರಂದನವನ್ನು ಕೇಳಿ ನೊಂದ. ಆ ಎಳೆಯ ವಯಸ್ಸಿನಲ್ಲೇ ಅವನಲ್ಲಿ ಪ್ರಾಣಿದಯೆ ಪುಟಿದೆದ್ದಿತು. ಇದೇ ಬಾಲಕ ಮುಂದೆ-'ದಯೆಯೇ ಧರ್ಮದ ಮೂಲವಯ್ಯ" ಎಂದ ಮಹಾಮಾನವತಾವಾದಿಯಾಗಿ, ಮಾನವೀಯ ಮೌಲ್ಯಗಳನ್ನು ಜಗಕ್ಕೆಲ್ಲಾ ಸಾರಿದ ಯೋಗಿಯಾಗಿ, ಜಗದಣ್ಣ-ಜಗಜ್ಯೋತಿ ಬಸವಣ್ಣನಾದರು!

ಬಸವಣ್ಣನಿಗೆ ಉಪನಯನ ಮಾಡಲು ಹಿರಿಯರು ನಿರ್ಧರಿಸಿದಾಗ, ಅವರಿಗೆ ಬೇಸರವಾಗದಿರಲೆಂದು 'ಉಪನಯನ' ಮಾಡಿಸಿಕೊಂಡರೂ, ದಿನ ಕಳೆದಂತೆ ಜನಿವಾರ ಕಳಚಿ, ಬಂಧುಗಳನ್ನು ತ್ಯಜಿಸಿ, ಹುಟ್ಟಿದ ಬಾಗೇವಾಡಿಯನ್ನು ಬಿಟ್ಟು ಪ್ರಶಾಂತವಾಗಿದ್ದ ಸಂಗಮಕ್ಷೇತ್ರಕ್ಕೆ ಬಂದರು. ಅಲ್ಲಿದ್ದ 'ಜಾತವೇದ' ಮುನಿಗಳನ್ನು ತಮ್ಮ ಗುರುಗಳಾಗಿ ಪರಿಗ್ರಹಿಸಿ ದೀಕ್ಷೆ ಪಡೆದು ಅಲ್ಲಿಯೇ ಶಿಷ್ಯ ವೃತ್ತಿ ಪ್ರಾರಂಭಿಸಿದರು. ಬಹಳ ಬೇಗ ಜ್ಞಾನಿಗಳೂ, ದೈವಭಕ್ತರೂ ಆದರು.

೧೧೬೨ರಲ್ಲಿ ತೈಲಪನ ಕೊಲೆಯಾಗಿ ಬಿಜ್ಜಳನ ಚಕ್ರಾಧಿಪತ್ಯವಿದ್ದ ಕಾಲವದು. ಬಿಜ್ಜಳನ ಮಂತ್ರಿಯೂ, ಬಸವಣ್ಣನವರ ಸೋದರ ಮಾವನೂ ಆದ ಬಲದೇವನು ತನ್ನ ಮಗಳಾದ ಗಂಗಾಂಬಿಕೆಗೆ ದೀಕ್ಷಾವಿಧಿ ಮಾಡಿಸಿ ಶಾಸ್ತ್ರೋಕ್ತವಾಗಿ ಬಸವಣ್ಣನಿಗೆ ವಿವಾಹ ಮಾಡಿಕೊಟ್ಟು, ಸಾಕಷ್ಟು ಆಸ್ತಿಯನ್ನೂ ಕೊಟ್ಟು, ತನ್ನ ಮನೆಯಲ್ಲಿಯೆ ಇರಿಸಿಕೊಂಡನು. ಅತ್ತೆ-ಮಾವರ ಇಚ್ಛೆಯಂತೆ ಬಸವಣ್ಣ ಕಲ್ಯಾಣದಲ್ಲಿ ನೆಲೆಸಿದರು. ಶಿವಪೂಜೆ, ಶಿವಧ್ಯಾನ, ದಾಸೋಹದಲ್ಲಿ ಕಾಲ ಕಳೆದರು.

ಕಾಲಾನಂತರ ಮಾವನಾದ ಬಲದೇವ ತೀರಿಕೊಳ್ಳಲಾಗಿ, ಅವನ ಅಧಿಕಾರವನ್ನು ಬಿಜ್ಜಳನು ಬಸವಣ್ಣನಿಗೆ ಕೊಟ್ಟನು. ಬಸವಣ್ಣ ಬಿಜ್ಜಳ ರಾಜನ ಭಂಡಾರಿಯಾದರು. ದಂಡನಾಯಕ ಸಿದ್ದದಂಡೇಶನು ತನ್ನ ಮಗಳಾದ ನೀಲಾಂಬಿಕೆಯನ್ನು ಬಸವಣ್ಣನಿಗೆ ಕೊಟ್ಟು ಮದುವೆ ಮಾಡಿದನು. ಬಸವಣ್ಣನವರು ಭಂಡಾರಿಯಾದುದರಿಂದ ಲೌಕಿಕ ಸ್ಥಾನಮಾನ ಹೆಚ್ಚಿ ಅವರ ಧಾರ್ಮಿಕ ಮತ್ತು ಸಾಮಾಜಿಕ ಚಟುವಟಿಕೆಗಳಿಗೆ ವಿಶಾಲ ವ್ಯಾಪ್ತಿ ಪ್ರಾಪ್ತಿಯಾಯಿತು.

ನಿತ್ಯವೂ ಶಿವರಾತ್ರಿಯಾಯಿತು! ಶರಣರು, ಸಾಧಕರು ಬಸವಣ್ಣನವರ ಮನೆಯಲ್ಲಿ ಸೇರುತ್ತಿದ್ದರು. ಬಸವಣ್ಣನ ನುಡಿ ಕೇಳಲು ಅವರ ಮನ ತವಕಿಸುತಿತ್ತು. ಅವರಿಗೆ ಬಸವಣ್ಣ-"ಜಾತಿ ಬೇಧ ತಪ್ಪು. ಹುಟ್ಟಿದ ಜಾತಿ ಮುಖ್ಯವಲ್ಲ, ಬದುಕುವ ರೀತಿ ಮುಖ್ಯ. ಭಕ್ತಿ ಹಾಗೂ ಶುದ್ಧ ಜೀವನ ಮಾಡಿ" ಎಂದು ಕರೆಯಿತ್ತರು. ದಿನೇ ದಿನೇ ಭಕ್ತವೃಂದ ಬೆಳೆಯಿತು.

ಸ್ತ್ರೀ ಕುಲಕ್ಕೆ ಕಂಟಕ ಪ್ರಾಯವಾಗಿ ಅಂಟಿದ್ದ ಎಲ್ಲ ಸಂಕೋಲೆಗಳನ್ನು ಕಳಚಿಟ್ಟು, ಕ್ರಾಂತಿಯ ಜ್ಯೋತಿ ಎತ್ತಿ ಹಿಡಿದ ಮಹಾಪುರುಷ ಬಸವಣ್ಣ! ಸಾಮಾಜಿಕ ಸಮಾನತೆಯೇ ಸಾಧ್ಯವಿಲ್ಲದ ಆ ಕಾಲದಲ್ಲಿ "ಧಾರ್ಮಿಕ ಕ್ಷೇತ್ರದಲ್ಲಿ ಮಹಿಳೆಯರಿಗೂ ಪುರುಷರಷ್ಟೇ ಹಕ್ಕಿದೆ" ಎಂದು ಹೇಳಿ ಲಿಂಗಧಾರಣೆ, ದೀಕ್ಷಾ ಸಂಸ್ಕಾರಗಳಿಗೆ ಅವಕಾಶ ಕಲ್ಪಿಸಿಕೊಟ್ಟು, ಸಾಮಾಜಿಕ ಹಾಗೂ ಧಾರ್ಮಿಕ ಕ್ಷೇತ್ರಗಳೆರಡರಲ್ಲೂ ಸ್ತ್ರೀಯರಿಗೆ ಸಮಾನತೆಯ ವಜ್ರ ಕವಚ ತೊಡಿಸಿದ ಸಮತಾ ಧರ್ಮಿ ಬಸವಣ್ಣ! ವರ್ಗ-ವರ್ಣಭೇದವನ್ನು, ಅಸ್ಪೃಶ್ಯತೆಯನ್ನು ತೊಡೆದು, "ಈ ಲೋಕ ಕರ್ತಾರನ ಕಮ್ಮಟ, ಕಾಯಕವೇ ಕೈಲಾಸ, ಪ್ರತಿಯೊಬ್ಬರೂ ಪರಿಶ್ರಮದಿಂದ ದುಡಿದು ತಿನ್ನಬೇಕು. ತಮ್ಮ ಕೆಲಸಗಳನ್ನು ನಿಷ್ಠೆ ಹಾಗೂ ಪ್ರಾಮಾಣಿಕತೆಯಿಂದ ಮಾಡಬೇಕು" ಎಂದ ಕಾಯಕಯೋಗಿ ಬಸವಣ್ಣ! ಅಲ್ಲದೇ ಅಂತರ್ಜಾತೀಯ ವಿವಾಹಕ್ಕೆ ಅಡಿಗಲ್ಲಿಟ್ಟ ವಿಶ್ವಪ್ರೇಮಿ ಬಸವಣ್ಣ!

ತಮಗಿದ್ದ ಭಂಡಾರಿಯ ಸ್ಥಾನಮಾನ ಬಲದಿಂದ ಅತಿ ಕ್ರೂರವೂ, ಹೇಯವೂ ಆದ ಸತಿಸಹಗಮನ ಪದ್ಧತಿಯ ರದ್ಧತಿ ಕಡ್ಡಾಯ ಜಾರಿಗೊಳಿಸುವಂತೆ ರಾಜಾಜ್ಞೆಯನ್ನು ಹೊರಡಿಸಲು ಪ್ರೇರಣೆಯಿತ್ತು, ಸಮಾಜಕ್ಕಂಟಿದ ಮತ್ತೊಂದು ಕಳಂಕವನ್ನು ಒರೆಸಿದ ಅಕಳಂಕ ಹಸ್ತ ಬಸವಣ್ಣನವರದ್ದು!

ಬಸವಣ್ಣನವರ ಸಾಮಾಜಿಕ ಹಾಗು ಧಾರ್ಮಿಕ ಕಾರ್ಯಚಟುವಟಿಕೆಗಳು ಎಲ್ಲರನ್ನು ಆಕರ್ಷಿಸಿದವು. ಅಲ್ಲಮಪ್ರಭು ಮೊದಲಾದವರು ಬಂದು ಸೇರಿದರು. 'ಅನುಭವ ಮಂಟಪ'ವನ್ನು ಕಟ್ಟಿದರು. 'ಕಲ್ಯಾಣ'ವೆಂಬುದು ಶಿವಶರಣರ ಕೈಲಾಸವಾಯಿತು! 'ಅನುಭವ ಮಂಟಪ' ಒಂದು ಜ್ಞಾನದೇಗುಲವಾಯಿತು. ಅಣ್ಣನೊಡನೆ, ಅಲ್ಲಮಪ್ರಭು, ಸಿದ್ಧರಾಮ, ಮಹಾದೇವಿ ಅಕ್ಕ, ಚೆನ್ನಬಸವಣ್ಣ ಮುಂತಾದ ಅಸಾಮಾನ್ಯ ಜ್ಞಾನಜ್ಯೋತಿಗಳು ಈ ಮಂಟಪದ ಪ್ರಸಿದ್ಧಿಯನ್ನು ಹೆಚ್ಚಿಸಿದುವು!



ಇಂಥ ಅಣ್ಣನ ನೆರಳ ಗುರುರಕ್ಷೆಯಲ್ಲಿ ಮಹಾದೇವಿ ಅಕ್ಕ ಅದೆಷ್ಟು ಸುರಕ್ಷಿತಳಾಗಿದ್ದಿರಬಹುದು! ಆ ಕೃತಜ್ಞತೆಯನ್ನು ಆಕೆಯು ಹಲವಾರು ವಚನಗಳಲ್ಲಿ ಕಾಣಬಹುದು.

*"ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂದ*
*ದಾರ್ಶನಿಕ ಬಸವಣ್ಣ!*
*ಅಂತರಂಗ-ಬಹಿರಂಗ ಶುದ್ಧಿಗಳನರುಹಿದ ವಿಚಾರವಾದಿ*
*ಮಹಾಮಾನವ ಬಸವಣ್ಣ!*
*ಮಾನವ ಧರ್ಮ ಸಂಸ್ಥಾಪನೆ ಮಾಡಿದ ಸಿದ್ಧಿ ಪುರುಷ, ಧರ್ಮಗುರು*
*ಬಸವಣ್ಣ!*
*ನಿಷ್ಕಾಮ ಪ್ರೇಮದಲ್ಲಿ ಜಗವನ್ನು ಕಂಡ ದಾಸೋಹಿ ಜಗದಣ್ಣ ಬಸವಣ್ಣ!*

ಇಲ್ಲಿ ಯಾವ ವೈಭವೀಕರಣವೂ ಇಲ್ಲ. ಅವರ ಮೇಲಿನ ನನ್ನ ಅಭಿಮಾನ ಇಂದು ನಿನ್ನೆಯದಲ್ಲ. ಚಿಕ್ಕಂದಿನಿಂದಲೂ ನನ್ನ ಮನದಲ್ಲಿ ನೆಲೆಯಾಗಿದ್ದು, ಅದನ್ನು ಪ್ರತಿಪಾದಿಸುವ ನನ್ನ ಒಂದು ರಚನೆ ಹೀಗಿದೆ:

*ನಿನ್ನ ನೋಡೆ-ಅವನ ನೋಡೆ, ಬಾರದ ಭಕ್ತಿ,*
*ಬಸವರ ಭಾವಚಿತ್ರವ ನೋಡೆ ಜಾಗೃತವದೇಕಣ್ಣ?*
*ನುಡಿದರೆ ಮುತ್ತಿನ ಹಾರದಂತಿರಬೇಕೆಂದಣ್ಣನ ಕಂಡರೆ*
*ಆತ್ಮದ ಲಿಂಗ ಶುದ್ಧವಾಗುವುದಣ್ಣ!*
*ಕಣ್ಣ ಮುಚ್ಚೆ ಭಕ್ತಿ ಮೂಡುವುದಣ್ಣ!*
*ಮುಚ್ಚಿದ ಕಣ್ಣಲ್ಲೂ ಅವರ ಚಿತ್ರ ಮೂಡುವುದಣ್ಣ!*
*-ತೇಜ ನಿನದ॥*

ಅಕ್ಕ ಮಹಾದೇವಿಗೆ ಸಿಕ್ಕ ಮಾನ್ಯತೆಗೋ, ಸ್ತ್ರೀಕುಲಕ್ಕೆ ಅಣ್ಣ ದೊರಕಿಸಿಕೊಟ್ಟ ನ್ಯಾಯಕ್ಕೋ ಅಣ್ಣನ ಕಣ್ಣಲ್ಲಿ ಕಂಡ ಅಖಂಡ ದಿವ್ಯತೆಗೋ, ಒಟ್ಟಾರೆ ಅಣ್ಣನ ಕಟ್ಟಾ ಆಭಿಮಾನಿಯಾದೆ.

ಅಂದು ಬಸವಣ್ಣನವರ ಅಭಿಮಾನಿಗಳ ದಂಡೇ ಇತ್ತೆನ್ನಬಹುದು. ಅವರ ಜನಪ್ರಿಯತೆ ಕಂಡು ಕರುಬಿದ ಬಿಜ್ಜಳ, ಶಿವಶರಣರನ್ನು ಹಿಂಸಿಸತೊಡಗಿದನು. ಮನನೊಂದ ಬಸವಣ್ಣ ಮಂತ್ರಿ ಪದವಿ ತೊರೆದು ಕಪ್ಪಡಿ ಸಂಗಮೇಶ್ವರ ಕ್ಷೇತ್ರಕ್ಕೆ ಹೋಗಿ ನೆಲೆಸಿದರು. ವಚನ ಸಾಹಿತ್ಯವೆಂಬ ದಿವ್ಯಜ್ಯೋತಿಯನ್ನು ಜಗಕ್ಕೆ ಬಳುವಳಿಯಾಗಿತ್ತು, ವಿಶ್ವಬಂಧು, ಜಗದಣ್ಣ, ಯುಗಪುರುಷ, ಕ್ರಾಂತಿ ದೀವಿಗೆ ಬಸವಣ್ಣನವರು ೧೧೬೮ರಲ್ಲಿ ಶಿವೈಕ್ಯರಾದರು.

೮೩೭ ವರ್ಷಗಳ ಹಿಂದೆ ಪ್ರಜ್ವಲಿಸಿದ ಈ ಅಖಂಡ ಜ್ಯೋತಿ ಇಂದಿಗೂ ಭವ್ಯತೆಯಿಂದ ಜನಮನದಲ್ಲಿ ಬೆಳಗುತ್ತಲೇ ಇದೆ! ಭವದ ಕತ್ತಲ ಕಳೆದು, ಸರ್ವಕಾಲಿಕ ಸಮನ್ವಯ ತತ್ವವನ್ನು ಬಿತ್ತಿ, ಚಿಂತನೆಯ ಚೈತನ್ಯದ ನೀರೆರೆದು ಪೋಷಿಸಿ, ವಚನ ಸಾಮ್ರಾಜ್ಯವನ್ನು ಹೆಮ್ಮರವಾಗಿಸಿ, ಶರಣ ಸಾಹಿತ್ಯ ಗಂಧವನ್ನು ಜಗದ ಗಾಳಿಯಲ್ಲಿ ಹರಡಿದ ಆ ಮನದಣ್ಣನಿಗೆ ಶರಣು ಶರಣಾರ್ಥಿ ಎನ್ನುತ್ತ ಈ ವಚನ ಪುಷ್ಪದ ಸಮರ್ಪಣೆ ಮಾಡುತ್ತಿದ್ದೇನೆ:

*ಅಣ್ಣ ನೀ, ಭವದ ಭವ್ಯತೆಯ ಸೃಷ್ಟಿ!*
*ಆತ್ಮವಿಕಸಿತ, ಲೋಕಹಿತ, ಆಭೂತ*
*ಶುದ್ಧ ದಾರ್ಶನಿಕ ದೃಷ್ಟಿ!*
*ಜಗದ ಕಲ್ಯಾಣಕ್ಕೆ ನಿನ್ನಿಂದ ವಚನ ಸಂವೃಷ್ಟಿ!*
*ಭವದ ಅರಿವಿನ ಬರವ ನೀಗಿತ್ತು ನಿನ್ನ ದಿವ್ಯದೃಷ್ಟಿ!*
*-ತೇಜ ನಿನದ॥*

ಶಿವಶರಣರಿಗೆಲ್ಲ ಶರಣು ಶರಣಾರ್ಥಿ!

-ತೇಜಸ್ವಿನಿದೇವಿ ಅರಸ್, ಬೆಂಗಳೂರು

### ಡಿಸೆಂಬರ್ ೧೭ ಮತ್ತು ೧೮ರಂದು ರಾಜ್ಯಮಟ್ಟದ ಐದನೆಯ ಮಹಿಳಾ ಸಮಾವೇಶ

ಹಾವೇರಿಯಲ್ಲಿ ಇದೇ ೨೦೦೫ರ ಡಿಸೆಂಬರ್ ೩ ಮತ್ತು ೪ರಂದು ನಡೆಯಲು ನಿರ್ಧರಿಸಲಾಗಿದ್ದ ಕದಳಿ ವೇದಿಕೆಯ ರಾಜ್ಯಮಟ್ಟದ ಐದನೆಯ ಮಹಿಳಾ ಸಮಾವೇಶವನ್ನು ಅನಿವಾರ್ಯ ಕಾರಣಗಳಿಂದ ಡಿಸೆಂಬರ್ ೧೭ ಮತ್ತು ೧೮ರಂದು ನಡೆಸಲಾಗುತ್ತದೆ. ಸಮಾವೇಶದಲ್ಲಿ ಪಾಲುಗೊಳ್ಳಲು ಆಸಕ್ತಿಯಿರುವ ಮಹಿಳಾ ಬಂಧುಗಳು "ಸ್ವಾಗತ ಸಮಿತಿ, ಕದಳಿ ಮಹಿಳಾ ಸಮಾವೇಶ, ಗಾಣಿಗೇರಿ ಕಟ್ಟಡ, ದತ್ತಾತ್ರೇಯ ಗುಡಿ ಹತ್ತಿರ, ವಿದ್ಯಾನಗರ ಪೂರ್ವ ಭಾಗ, ಹಾವೇರಿ - ೫೮೧೧೧೦" ಈ ವಿಳಾಸವನ್ನು ಸಂಪರ್ಕಿಸಬಹುದು.

ಪ್ರತಿನಿಧಿ ಶುಲ್ಕ ರೂ. ೧೦೦ ಎಂದು ನಿಗದಿ ಮಾಡಲಾಗಿದೆ. ಪ್ರತಿನಿಧಿಗಳಿಗೆ ಆಕರ್ಷಕ ಕಿಟ್ ನೀಡುವ ಜೊತೆಗೆ ಊಟ ವಸತಿ ವ್ಯವಸ್ಥೆ ಮಾಡಲಾಗುವುದು. ಪ್ರತಿನಿಧಿಗಳಾಗಲು ಪುರುಷರಿಗೂ ಅವಕಾಶವಿದೆ. ಸಮಾವೇಶ ಸಂದರ್ಭದಲ್ಲಿ ಉಪಯುಕ್ತವಾದ ಸ್ಮರಣ ಸಂಚಿಕೆಯನ್ನು ಹೊರತರಲಾಗುತ್ತದೆ. ಅಭಿಮಾನಿಗಳು ಸ್ಮರಣ ಸಂಚಿಕೆಗೆ ಜಾಹೀರಾತು ನೀಡಬಹುದು.

ಪ್ರತಿನಿಧಿ ಶುಲ್ಕ ಮತ್ತು ಜಾಹೀರಾತು ಶುಲ್ಕವನ್ನು "ಹಾವೇರಿ ಜಿಲ್ಲಾ ಕದಳಿ ಮಹಿಳಾ ವೇದಿಕೆ" ಈ ಹೆಸರಿಗೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು. ಹೆಚ್ಚಿನ ವಿವರಗಳಿಗೆ ಸ್ವಾಗತ ಸಮಿತಿಯನ್ನು ಸಂಪರ್ಕಿಸಬಹುದು.







## ಕೊಪ್ಪಳ ಜಿಲ್ಲಾ ಯುವಜನ ಸಮಾವೇಶ – ೯ ಅಕ್ಟೋಬರ್ ೨೦೦೫

ವರದಿ : ಚಂದ್ರಶೇಖರ ನೂಲ್ವಿ



ಶರಣ ಸಂಭ್ರಮ – ಶಿಸ್ತಿನ ಮೆರವಣಿಗೆ

ಯುವಸಮುದಾಯದಲ್ಲಿ ಪರಸ್ಪರ ಸೌಹಾರ್ದತೆ, ರಾಷ್ಟ್ರೀಯ ದೃಷ್ಟಿ, ಕರ್ತವ್ಯ ಜಾಗೃತಿ ಹಾಗೂ ಕಾಯಕ ನಿಷ್ಠೆಗಳನ್ನು ಬೆಳೆಸುವ ಆಶಯದಿಂದ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಾ ಘಟಕದ ಆಶ್ರಯದಲ್ಲಿ ದಿನಾಂಕ ೯ನೇ ಅಕ್ಟೋಬರ್ ೨೦೦೫ರಂದು 'ಕೊಪ್ಪಳ ಜಿಲ್ಲಾ ಪ್ರಥಮ ಯುವಜನ ಸಮಾವೇಶ'ವನ್ನು ನಡೆಸಲಾಯಿತು. ಸಮಾವೇಶದಲ್ಲಿ ಜಿಲ್ಲೆಯ ಕೊಪ್ಪಳ, ಗಂಗಾವತಿ, ಕುಷ್ಟಗಿ ಮತ್ತು ಯಲಬುರ್ಗ ತಾಲೂಕುಗಳ ಸುಮಾರು ಒಂದು ಸಾವಿರ ಯುವಕ-ಯುವತಿಯರು ಮತ್ತು ಸುಮಾರು ಒಂದು ಸಾವಿರ ಶರಣ ಸಾಹಿತ್ಯಾಸಕ್ತರು ಪಾಲ್ಗೊಂಡಿದ್ದರು.

ಸಮಾವೇಶ ಗಂಗಾವತಿಯ ಶ್ರೀ ಚನ್ನಬಸವಸ್ವಾಮಿ ಕಲ್ಯಾ ಮಂಟಪದಲ್ಲಿ ಜರುಗಿತು. ಅಂದು ಬೆಳಿಗ್ಗೆ ೮.೦೦ ಗಂಟೆಗೆ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಜಿಲ್ಲಾ ಘಟಕದ ಅಧ್ಯಕ್ಷರಾದ ಶ್ರೀ ಆರ್.ಎಂ. ಪಾಟೀಲರವರು ಷಟ್‌ಸ್ಥಲ ಧ್ವಜಾರೋಹಣವನ್ನು ನೆರವೇರಿಸುವುದರ ಮೂಲಕ ಸಮಾವೇಶಕ್ಕೆ ಚಾಲನೆ ನೀಡಿದರು.

೧೦.೦೦ ಗಂಟೆಗೆ ಸರಿಯಾಗಿ ಶರಣ ವೀರಗಣಾಚಾರಿ ಮಡಿವಾಳ ಮಾಚಿದೇವ ವೇದಿಕೆಯಲ್ಲಿ ಸಮಾವೇಶದ ಉದ್ಘಾಟನಾ ಸಮಾರಂಭ ಪ್ರಾರಂಭವಾಯಿತು. ಕುಮಾರಿ ವೀಣಾ ಮುದಗಲ್ ಹಗೂ ಸಂಗಡಿಗರು 'ಶರಣ ವಾಣಿ' ನಡೆಸಿಕೊಟ್ಟರು. ಸ್ವಾಗತ ಸಮಿತಿಯ ಅಧ್ಯಕ್ಷರಾದ ಶ್ರೀ ಪರಣ್ಣ ಮುನವಳ್ಳಿಯವರು ಸರ್ವರನ್ನು ಸ್ವಾಗತಿಸಿ, ಬಸವಾದಿ ಶರಣರ ವಚನ ಸಾಹಿತ್ಯವನ್ನು ಎಲ್ಲೆಡೆ ಬೆಳಗಿಸುವ ಉದ್ದೇಶದಿಂದ ಶರಣ ಸಾಹಿತ್ಯ ಪರಿಷತ್ತು ಹಮ್ಮಿಕೊಂಡಿರುವ ನಾನಾ ಯೋಜನೆಗಳಲ್ಲಿ ಯುವಜನ ಸಮಾವೇಶ ಒಂದು ಮಹತ್ವದ ಕಾರ್ಯಕ್ರಮವಾಗಿದ್ದು, ನಾಡಿನಲ್ಲೇ ಮೊದಲ ಜಿಲ್ಲಾ ಮಟ್ಟದ ಸಮಾವೇಶ ಸಂಘಟಿಸುವ ಅವಕಾಶ ಗಂಗಾವತಿ ತಾಲೂಕಾ ಘಟಕಕ್ಕೆ ದೊರೆತಿದೆ ಎಂದರು.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ (ಕೇಂದ್ರ ಸಮಿತಿಯ) ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪನವರು ಜ್ಯೋತಿ ಬೆಳಗಿಸುವುದರ ಮೂಲಕ ಸಮಾವೇಶವನ್ನು ಉದ್ಘಾಟಿಸಿ ಯುವಜನರ ಕ್ರಿಯಾಶೀಲತೆಗಾಗಿ, ಜಾಗೃತಿಗಾಗಿ, ಸಮಷ್ಟಿ ಕ್ಷೇಮದ ದೃಷ್ಟಿಗಾಗಿ, ವೈಯಕ್ತಿಕ ರೀತಿ ನೀತಿಗಳಿಗಾಗಿ ಮಾರ್ಗದರ್ಶನದ ಕೊರತೆಯಿದ್ದು ಇಂತಹ ಸಮಾವೇಶಗಳು ದೀಪವಾಗಲಿವೆ ಎಂದು ತಿಳಿಸಿದರು.

ನಂತರ ಗಂಗಾವತಿ ತಾಲೂಕಾ ಶರಣ ಸಾಹಿತ್ಯ ಪರಿಷತ್ ವತಿಯಿಂದ ಪ್ರಕಟಿಸಲಾದ ಶ್ರೀ ಎಸ್.ವಿ. ಪಾಟೀಲ್ ವಿರಚಿತ ಶರಣೆ ಆಯ್ದಕ್ಕಿ ಲಕ್ಕಮ್ಮ ನಾಟಕ ಗ್ರಂಥದ ಬಿಡುಗಡೆಯನ್ನು ಕೊಪ್ಪಳ ಲೋಕಸಭಾ ಕ್ಷೇತ್ರದ ಸಂಸದರಾದ ಶ್ರೀ ಕೆ. ವಿರುಪಾಕ್ಷಪ್ಪನವರು ನೆರವೇರಿಸಿ, ಅಧಿಕಾರ ಸ್ಥಾನಮಾನಕ್ಕಿಂತ ಮಿಗಿಲಾಗಿ ಮಾನವೀಯ ಮೌಲ್ಯಗಳಿಂದ ಪ್ರೀತಿ ವಿಶ್ವಾಸ ಅನುಕಂಪ ಸಹಾನುಭೂತಿ ಹಾಗೂ ಧರ್ಮದ ಉತ್ತಮ ತತ್ವಗಳನ್ನು ಯುವಕರು ಅಳವಡಿಸಿಕೊಳ್ಳಬೇಕು ಎಂದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ವೈದ್ಯಕೀಯ ಶಿಕ್ಷಣ ಸಚಿವ



ತುಂಬಿದ ಸಭಾಭವನ



ಯುವ ಪ್ರತಿಭೆಗಳಿಗೆ ನವ ಅನುಭವ ನೀಡಿದ ಶರಣ ರಸಪ್ರಶ್ನೆ

ಶ್ರೀ ಇಕ್ಬಾಲ್ ಅನ್ಸಾರಿ ಮಾತನಾಡಿ, ೧೨ನೇ ಶತಮಾನದಲ್ಲಿ ಶರಣರು ಮಹತ್ವದ ಕ್ರಾಂತಿ ಮಾಡಿದರು. ಯುವಕರು ಜೀವನದಲ್ಲಿ ಗುರಿಯೊಂದನ್ನು ಹೊಂದಿ ತಲುಪಲು ಮುಂದಾಗಬೇಕು. ಪ್ರಯತ್ನದಿಂದ ಸಾಧನೆಮಾಡಿ ದೇಶಕ್ಕೆ ಉತ್ತಮ ಕೊಡುಗೆ ನೀಡಬೇಕು ಎಂದು ಹೇಳಿದರು.

ಸಮಾವೇಶದ ಸರ್ವಾಧ್ಯಕ್ಷತೆಯನ್ನು ವಹಿಸಿದ್ದ ಗಂಗಾವತಿ ಕೆ.ಎಸ್.ಸಿ. ಮಹಿಳಾ ಕಾಲೇಜಿನ ಪ್ರಾಂಶುಪಾಲರಾದ ಡಾ. ಶರಣಬಸಪ್ಪ ಕೋಲ್ಕಾರ ಮಾತನಾಡುತ್ತಾ ಪ್ರತಿಯೊಬ್ಬರ ಬಾಳಿನಲ್ಲಿ ಯೌವ್ವನಾವಸ್ಥೆ ಒಂದು ದಿವ್ಯ ಘಳಿಗೆ. ಜೀವನದ ಎಲ್ಲ ಸಾಧ್ಯತೆಗಳನ್ನು ಸಾಧಿಸಿಕೊಂಡು ಬದುಕನ್ನು ವ್ಯವಸ್ಥಿತವಾಗಿ, ಸುಂದರವಾಗಿ ರೂಪಿಸಿಕೊಳ್ಳಲು ಅವಕಾಶವಿರುವ ಅಪೂರ್ವ ಸಂದರ್ಭ. ಈ ಯುವಶಕ್ತಿಯ ಕಾಲ ಕೇವಲ ಒಬ್ಬ ವ್ಯಕ್ತಿಯ ಅಮೂಲ್ಯ ಕಾಲವಷ್ಟೇ ಅಲ್ಲ. ಅದು ಸಾಮಾಜಿಕ ಶಕ್ತಿಯೂ ಹೌದು, ರಾಷ್ಟ್ರೀಯ ಶಕ್ತಿಯೂ ಹೌದು. ಹಾಗಾಗಿ ನಾವೆಲ್ಲಾ ಇಂಥ ಅದ್ಭುತವಾದ ಶಕ್ತಿಯಾಗಬೇಕಾಗಿದೆ. ನಮ್ಮ ದೇಶವನ್ನು ಜಾಗತಿಕ ಮಟ್ಟದಲ್ಲಿ ತಲೆ ಎತ್ತಿ ನಿಲ್ಲುವಂತೆ ಕಟ್ಟಬೇಕಾಗಿದೆ. ಆದರೆ ಇಂದು ಅನೇಕ ಯುವಕರು ತಪ್ಪು ಹಾದಿಯಲ್ಲಿ ನಡೆಯುತ್ತಿದ್ದು, ಅವರಲ್ಲಿ ಸ್ಫೂರ್ತಿಯನ್ನು ತುಂಬಿ ರಾಷ್ಟ್ರೀಯ ಚಿಂತನೆಗಳನ್ನು ಬಿತ್ತಿ ಅವರನ್ನು ದೇಶದ ಶಕ್ತಿಯನ್ನಾಗಿ ರೂಪಿಸಬೇಕಾದುದು ಇಂದಿನ ತುರ್ತು ಕಾರ್ಯವಾಗಿದೆ ಎಂದರು.

ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ಕೊಪ್ಪಳ ಜಿಲ್ಲೆಯ ಬಸವ ಸಮಿತಿ ಅಧ್ಯಕ್ಷ ಶ್ರೀ ಬಸವರಾಜ ಬಳ್ಳೊಳ್ಳಿಯವರು ಮಾತನಾಡುತ್ತಾ ಯುವಕರು ಜ್ಞಾನ ಸಂಪಾದಿಸಿಕೊಳ್ಳಬೇಕು. ಅದರಿಂದ ಸರಿಯಾದ ಮಾರ್ಗದಲ್ಲಿ ನಡೆಯಲು ಸಾಧ್ಯವೆಂದರು. ಸಾನ್ನಿಧ್ಯ ವಹಿಸಿದ್ದ ಗಂಗಾವತಿ ಕಲ್ಮಠದ ಶ್ರೀ ಮ.ನಿ.ಪ್ರ. ಡಾ. ಕೊಟ್ಟೂರು ಮಹಾಸ್ವಾಮಿಗಳು, ಇಂದಿನ ಯುವಜನತೆಗೆ ಸೂಕ್ತ ಮಾರ್ಗದರ್ಶನದ ಕೊರತೆ ಇದೆ. ಇಂಥ ಸಮಾವೇಶ ಯುವಕರಿಗೆ ಮಾರ್ಗದರ್ಶಿಯಾಗಿದೆ ಎಂದು ಆಶೀರ್ವಚನ ನೀಡಿದರು. ತಾಲೂಕಾ ಘಟಕದ ಗೌರವಾಧ್ಯಕ್ಷರಾದ ಶ್ರೀ ಸಂಗಣ್ಣ ಘನವಾರಿಯವರು ವಂದನೆ ಅರ್ಪಿಸಿದರು.

### ವಿಶೇಷೋಪನ್ಯಾಸಗಳು

ಬೆಳಿಗ್ಗೆ ೧೧.೩೦ಕ್ಕೆ ವಿಶೇಷೋಪನ್ಯಾಗಳು ಪ್ರಾರಂಭವಾದವು. ಕೊಟ್ಟೂರಿನ ಶ್ರೀ ಕೊಟ್ಟೂರೇಶ್ವರ ಮಹಾವಿದ್ಯಾಲಯುದ ಪ್ರಾಂಶುಪಾಲರಾದ ಪ್ರೊ. ಎಸ್.ಎಸ್. ಹಿರೇಮಠರವರು 'ಶರಣರು ಸಾರಿದ ಸಮಾಜವಾದ' ಎನ್ನುವ ವಿಷಯದ ಮೇಲೆ ಉಪನ್ಯಾಸ ನೀಡುತ್ತಾ "ಕಾರ್ಮಿಕರು, ಕೂಲಿಕಾರರು, ರೈತರು, ಯುವಕರು ಇಂದು ಅನುಭವಿಸುತ್ತಿರುವ ಶೋಷಣೆಯನ್ನು ಕ್ರಾಂತಿಯ ಮೂಲಕ ನಾಶಗೊಳಿಸಲೇಬೇಕಾಗಿದೆ. ನಮ್ಮ ಸಂವಿಧಾನದ ಪೂರ್ವ ಪೀಠಿಕೆಯಲ್ಲಿ ಹೇಳಿದಂತೆ ನಮ್ಮ ರಾಷ್ಟ್ರವನ್ನು ಜಾತ್ಯಾತೀತ, ಸಮಾಜವಾದದ ಆದರ್ಶದ ನೆಲೆಯಲ್ಲಿ ಕಟ್ಟಬೇಕಾದರೆ ಒಂದು ಸಿದ್ಧಾಂತದ ಅಡಿಪಾಯದ ಮೇಲೆ ಸಮಾಜವನ್ನು ಕಟ್ಟಬೇಕು" ಎಂದು ತಿಳಿಸಿದರು.

ನಂತರ ಹಾಸನ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾದ ಶ್ರೀಮತಿ ಸುಶೀಲಾ ಸೋಮಶೇಖರ್ ಅವರು 'ಯುವಜನತೆ – ರಾಷ್ಟ್ರೀಯತೆ' ಎನ್ನುವ ವಿಷಯದ ಕುರಿತು ಉಪನ್ಯಾಸ ನೀಡಿ, "ಶರಣರು ಕಲ್ಯಾಣ ರಾಜ್ಯ ಕಟ್ಟುವ ಮೂಲಕ ಮಾನವ ಕಲ್ಯಾಣದ ಆಶಯವನ್ನು ಬಯಸಿದರು. ಅದೇ ಅವರ ಆದರ್ಶ ರಾಷ್ಟ್ರೀಯತೆ. ಯುವಕರು ಪ್ರೀತಿ, ಕರುಣೆ ಮುಂತಾದ ಮೌಲ್ಯಗಳಿಂದ ಕೂಡಿದ್ದಾದರೆ ಆದರ್ಶ ರಾಷ್ಟ್ರದ ಸ್ಥಾಪನೆ ಸಾಧ್ಯವಾಗುತ್ತದೆ" ಎಂದರು.

ಉಪನ್ಯಾಸ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಕೊಪ್ಪಳ ಬಿ.ಸಿ.ಎ. ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಹೆಚ್.ಎಸ್. ಪಾಟೀಲರು ವಹಿಸಿದ್ದು ಸಮಾಜವಾದ ಹಾಗೂ ರಾಷ್ಟ್ರೀಯತೆಯ ಉಜ್ವಲ ವಿಚಾರಗಳು ಶರಣರ ವಚನಗಳಲ್ಲಿ ಹರಳುಗಟ್ಟಿವೆ. ಕಾಯಕ ದಾಸೋಹ, ಸಕಲರಿಗೂ ಲೇಸನ್ನೇ ಬಯಸುವ ಶರಣರ ವಿಚಾರಗಳಿಂದ ಆದರ್ಶ ಸಮಾಜ ಹಾಗೂ ರಾಷ್ಟ್ರವನ್ನು ಕಟ್ಟಬಹುದೆಂದರು.




ಸಮಾವೇಶದ ಪ್ರತಿನಿಧಿಗಳ ಆಸಕ್ತಿ ಅರಳಿಸಿದ ಶ್ರೀ ಎಸ್. ಷಡಕ್ಷರಿ ಅವರಿಂದ ಸಮಾರೋಪ ನುಡಿ





### ಶರಣ ರಸಪ್ರಶ್ನೆ

ಮಧ್ಯಾಹ್ನ ೧.೦೦ ಗಂಟೆಗೆ ಊಟದ ಬಿಡುವಿನ ನಂತರ ೨.೦೦ ಗಂಟೆಗೆ ಶರಣ ರಸ ಪ್ರಶ್ನೆ ಕಾರ್ಯಕ್ರಮವನ್ನು ಗಂಗಾವತಿ ನಗರಸಭೆಯ ಅಧ್ಯಕ್ಷರಾದ ಶ್ರೀ ಹನ್ಮಂತಪ್ಪ ನಾಯಕ ಉದ್ಘಾಟಿಸಿದರು.

ರಸಪ್ರಶ್ನೆಯಲ್ಲಿ ಗಂಗಾವತಿ, ಕೊಪ್ಪಳ ತಾಲೂಕುಗಳಿಂದ ತಲಾ ಎರಡೆರಡು ತಂಡಗಳು, ಕುಷ್ಟಗಿ ಹಾಗೂ ಯಲಬುರ್ಗಿ ತಾಲೂಕು ಗಳಿಂದ ತಲಾ ಒಂದೊಂದರಂತೆ ಒಟ್ಟು ೬ ತಂಡಗಳು ಭಾಗವಹಿಸಿದ್ದವು.

ಮೈಸೂರಿನ ಶ್ರೀಮತಿ ರಾಧಾ ನೀಲಕಂಠರವರು ರಸಪ್ರಶ್ನೆಯನ್ನು ತುಂಬಾ ವೈಶಿಷ್ಟ್ಯಪೂರ್ಣವಾಗಿ ನಡೆಸಿಕೊಟ್ಟರು. ನೆರೆದಿದ್ದ ಸಭಿಕರು ರೋಚಕವಾಗಿ ನಡೆದ ರಸಪ್ರಶ್ನೆಯ ಕಾರ್ಯಕ್ರಮವನ್ನು ತುಂಬಾ ಆಸ್ಥೆಯಿಂದ ಆಸ್ವಾದಿಸಿದರು. ಶ್ರೀಮತಿ ಕಲ್ಯಾಣಿ ನಟರಾಜಪ್ಪ ಇವರು ರಸಪ್ರಶ್ನೆ ಸಹಾಯಕರಾಗಿ ನೆರವಾದರು.

### ಯುವಾಧಿವೇಶನ

ಸಂಜೆ ೪.೦೦ ಗಂಟೆಗೆ ಸರ್ವಾಧ್ಯಕ್ಷರಾದ ಡಾ. ಶರಣಬಸಪ್ಪ ಕೋಲ್ಕಾರ ಅಧ್ಯಕ್ಷತೆಯಲ್ಲಿ ಯುವಾಧಿವೇಶನ ಜರುಗಿತು. ಸಮಾವೇಶದಲ್ಲಿ ಪಾಲ್ಗೊಂಡ ವಿವಿಧ ತಾಲೂಕುಗಳ ಯುವಕ-ಯುವತಿ ಪ್ರತಿನಿಧಿಗಳು ಸಮಾವೇಶದ ಕುರಿತಾಗಿ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿ ಇಂಥ ವಿಶಿಷ್ಟ ಕಾರ್ಯಕ್ರಮ ತಮಗೆಲ್ಲಾ ತುಂಬಾ ಮಹತ್ವವಾದ, ಮಾರ್ಗದರ್ಶಿಯಾಗಿದೆಯೆಂದು ಹೇಳಿದರು.

ನಂತರ ಗಂಗಾವತಿ ತಾಲೂಕು ಶರಣ ಸಾಹಿತ್ಯ ಪರಿಷತ್ತಿನ ಪೋಷಕರಾದ ಶ್ರೀ ಮಂಜುನಾಥ ಸಿದ್ದಾಪುರ ಅವರು ಯುವಜನರಿಗೆ ಪೂರಕವಾದ ಹಾಗೂ ಕೆಲವು ಸ್ಥಳೀಯ ವಿಷಯುಗಳಿಗೆ ಸಂಬಂಧಿಸಿದಂತೆ ಮಂಡಿಸಿದ ನಿರ್ಣಯಗಳನ್ನು ಒಕ್ಕೊರಲಿನಿಂದ ಅಂಗೀಕರಿಸಲಾಯಿತು.

### ಸಮಾರೋಪ

ಸಂಜೆ ೫.೦೦ ಗಂಟೆಗೆ ಬೆಂಗಳೂರಿನ ರಮಣಶ್ರೀ ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ಎಸ್. ಷಡಕ್ಷರಿಯವರು ಸಮಾರೋಪ ಭಾಷಣವನ್ನು ಮಾಡಿದರು. ಮಾನವೀತೆಯೇ ಭಾರತೀಯ ಸಂಸ್ಕೃತಿಯ ಮಹಾಮೌಲ್ಯ. ನಮ್ಮಲ್ಲಿ ಅಜ್ಞಾನ, ಬಡತನ, ಅವೈಚಾರಿಕತೆಗಳು ಇರಬಹುದು. ಆದರೆ ಮಾನವೀಯತೆ ಎಂಬ ಸಿರಿ ಸಂಪತ್ತು ನಮ್ಮಲ್ಲಿದೆ. ಅದಕ್ಕಾಗಿ ಯುವಕರು ಮೊದಲಿಗೆ ಪಾಸಿಟಿವ್ ಥಿಂಕಿಂಗ್ ಬಳಸಿಕೊಂಡು ತಮ್ಮೆಲ್ಲ ಯೋಜನೆಗಳ ಬಗೆಗೆ ನಿಶ್ಚಿತ, ನಿರ್ದಿಷ್ಟ ಗುರಿ ಹೊಂದಬೇಕು ಅಂದಾಗ ಮಾತ್ರ ಅವರು ಜೀವನದಲ್ಲಿ ಯಶಸ್ಸು ಪಡೆಯಲು ಸಾಧ್ಯವೆಂದರು.

ಡಾ. ಶರಣಬಸಪ್ಪ ಕೋಲ್ಕಾರ ಮಾತನಾಡಿ, ದ್ವಂದತೆಯಲ್ಲಿ ಬದುಕುತ್ತಿರುವ ಇಂದಿನ ಯುವಜನತೆಗೆ ಇಂತಹ ಸಮಾವೇಶಗಳು ಮಾರ್ಗದರ್ಶನವನ್ನು ಮಾಡಬಲ್ಲವು. ಈ ಸಮಾವೇಶ ಯುವಕರಲ್ಲಿ ಪರಸ್ಪರ ಸೌಹಾರ್ದತೆ, ಕಾಯಕನಿಷ್ಠೆ, ರಾಷ್ಟ್ರೀಯತೆಗಳನ್ನು ಬೆಳೆಸಲು ಯಶಸ್ವಿಯಾಗಿದೆ. ಆದ್ದರಿಂದ ಸಮಾವೇಶವನ್ನು ಹಮ್ಮಿಕೊಂಡದ್ದಕ್ಕಾಗಿ ಶರಣ ಸಾಹಿತ್ಯ ಪರಿಷತ್ತಿನ ಕೇಂದ್ರಸಮಿತಿಗೆ, ಜಿಲ್ಲಾ ಹಾಗೂ ತಾಲೂಕು ಸಮಿತಿಗಳಿಗೆ ಕೃತಜ್ಞತೆಗಳನ್ನು ಸಲ್ಲಿಸಿದರು.

ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ಕನಕಗಿರಿ ಕ್ಷೇತ್ರದ ಶಾಸಕರಾದ ಶ್ರೀ ಜಿ. ವೀರಪ್ಪ ಕೇಸರಹಟ್ಟಿಯವರು ಮಾತನಾಡಿ ಯುವಕರಿಗೆ ಮಾರ್ಗದರ್ಶಿಯಾಗುವ ಇಂಥ ಕಾರ್ಯಕ್ರಮಗಳು ಹೆಚ್ಚೆಚ್ಚು ನಡೆಯಬೇಕು ಎಂದು ಆಶಿಸಿದರು.

ಸಮಾರಂಭದ ಸಾನ್ನಿಧ್ಯ ವಹಿಸಿದ್ದ ಚಿತ್ರದುರ್ಗ ಜಿಲ್ಲೆ ಸಾಣೆಹಳ್ಳಿಯ ಶ್ರೀ ತರಳಬಾಳು ಮಠದ ಪೂಜ್ಯರಾದ ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು ಆಶೀರ್ವಚನ ನೀಡುತ್ತಾ 'ಮಾತಿನಂತೆ ಮನವಿರಬೇಕು, ಹೇಳಿದಂತೆ-ಕೇಳಿದಂತೆ ವ್ಯಕ್ತಿಗತ ಬದುಕನ್ನು ಶುದ್ಧ ಮಾಡಿಕೊಳ್ಳುವ ಮನಸ್ಥಿತಿ ಬಹಳಷ್ಟು ಜನರಲ್ಲಿ ಇರುವುದಿಲ್ಲ. ಇದರಿಂದ ಯಾವುದೇ ಕಾರ್ಯ ಕೈಗೊಂಡರೂ ಅದು ಯಶಸ್ವಿಯಾಗದು. ಅದಕ್ಕಾಗಿ 'ನಡೆ ನುಡಿ' ಒಂದು ಮಾಡಿಕೊಳ್ಳಬೇಕು. ಜೊತೆಗೆ ದೈಹಿಕ, ಬೌದ್ಧಿಕ ಹಾಗೂ ನೈತಿಕ ಸಾಮರ್ಥ್ಯವನ್ನು ಬೆಳೆಸಿಕೊಂಡು ಯುವಕರು ದೇಶದ ಸಂಪತ್ತಾಗಬೇಕು ಎಂದು ಸೂಚಿಸಿದರು. ಕೊನೆಯಲ್ಲಿ ತಾಲೂಕಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಚಂದ್ರಶೇಖರ ನೂಲ್ವಿಯವರು ಸಮಾವೇಶ ಹಾಗೂ ಸಮಾರಂಭದ ಯಶಸ್ಸಿಗೆ ಸಹಕರಿಸಿದ ಎಲ್ಲ ಮಹನೀಯರಿಗೆ ವಂದನೆಗಳನ್ನು ಸಲ್ಲಿಸಿದರು.

### ಸಾಂಸ್ಕೃತಿಕ ಕಾರ್ಯಕ್ರಮ

ಸಂಜೆ ೭.೦೦ ಗಂಟೆಗೆ ಸಾಂಸ್ಕೃತಿಕ ಕಾರ್ಯಕ್ರಮುಗಳು ಪ್ರಾರಂಭವಾದವು. ಮೊದಲಿಗೆ ವಿವಿಧ ಗಾಯಕರು ವಚನ ಗಾಯನ ನಡೆಸಿಕೊಟ್ಟರು. ನಂತರ ರಾಜ್ಯ ಪ್ರಶಸ್ತಿ ಪುರಸ್ಕೃತ ರಂಗಸಾಹಿತಿ ಎಸ್.ವಿ. ಪಾಟೀಲ್ ರಚಿಸಿ ನಿರ್ದೇಶಿಸಿದ 'ಶರಣೆ ಆಯ್ದಕ್ಕಿ ಲಕ್ಕಮ್ಮ' ನಾಟಕವನ್ನು ಗಂಗಾವತಿಯು ಕಲ್ಮಠ ಶ್ರೀ ಚನ್ನಬಸವಸ್ವಾಮಿ ಮಹಿಳಾ ಮಹಾವಿದ್ಯಾಲಯುದ ವಿದ್ಯಾರ್ಥಿನಿಯುರು ಮನೋಜ್ಞವಾಗಿ ಅಭಿನಯಿಸಿದರು. ಒಟ್ಟಿನಲ್ಲಿ ಸಮಾವೇಶ ಜಿಲ್ಲೆಯ ಜನತೆಗೆ ಹೊಸ ಅನುಭವ ನೀಡುವಲ್ಲಿ ಯಶಸ್ವಿಯಾಯಿತು.

○

# ಕದಳಿ ಮಹಿಳಾ ವೇದಿಕೆಯ ಪ್ರಶಸ್ತಿ ಪ್ರದಾನ



ಡಾ. ವಿಜಯಾದೇವಿ ಅವರಿಗೆ ಪ್ರಶಸ್ತಿ ಪ್ರದಾನ

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕದಳಿ ಮಹಿಳಾ ವೇದಿಕೆ ಬೆಂಗಳೂರು ಘಟಕವು ತನ್ನ ಏಳನೆಯ ವಾರ್ಷಿಕೋತ್ಸವ ಮತ್ತು 'ಕದಳಿ ಪ್ರಶಸ್ತಿ ಪ್ರದಾನ' ಸಮಾರಂಭವನ್ನು ದಿನಾಂಕ ೨-೧೦-೨೦೦೫ ರಂದು ಬೆಂಗಳೂರಿನ ಶಿವರಾತ್ರೀಶ್ವರ ಕೇಂದ್ರದಲ್ಲಿ ಹಮ್ಮಿಕೊಂಡಿತ್ತು. ಶ್ರೀಮದ್ ವಿಭೂತಿಪುರ ವೀರಸಿಂಹಾಸನ ಸಂಸ್ಥಾನ ಮಠದ ಪಟ್ಟಾಧ್ಯಕ್ಷರಾದ ಷ.ಬ್ರ.ಶ್ರೀ. ಮಹಾಂತಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯ ಮತ್ತು ಅಖಿಲಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪನವರ ಅಧ್ಯಕ್ಷತೆಯಲ್ಲಿ ಕಾರ್ಯಕ್ರಮ ನಡೆಯಿತು. ಬಿಜಾಪುರದ ಮಹಿಳಾ ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕರಾದ ಡಾ. ಎಸ್.ಎಸ್.



ಕುಮಾರಿ ರಮ್ಯಾಗೆ ಪ್ರತಿಭಾ ಪುರಸ್ಕಾರ

ವಿಜಯ ಅವರಿಗೆ 'ಕದಳಿ ಪ್ರಶಸ್ತಿ' ಯನ್ನು ನೀಡಿ ಗೌರವಿಸಲಾಯಿತು. ಇದೇ ಸಂದರ್ಭದಲ್ಲಿ ನೃತ್ಯಕಲಾವಿದೆ ಶ್ರೀಮತಿ ಶಾರದಾ ಮತ್ತು ಅನ್ನಪೂರ್ಣಮ್ಮನವರನ್ನು ಸನ್ಮಾನಿಸಲಾಯಿತು. ಕುಮಾರಿ ರಮ್ಯ ದ್ವಾರಕನಾಥ್ (ಚಿತ್ರಕಲೆ) ಮತ್ತು ಕುಮಾರ ಜಿ.ಕೆ. ಅಭಯ ಆರ್ಯ (ಬ್ಯಾಂಡ್ಮಿಂಟನ್) ಅವರಿಗೆ ವಿಶೇಷ ಪ್ರತಿಭಾ ಪುರಸ್ಕಾರವನ್ನು ಮಾಜಿ ಸಚಿವೆ ಶ್ರೀಮತಿ ರಾಣಿಸತೀಶ್ ನೀಡಿ ಗೌರವಿಸಿದರು. ೯೦ಕ್ಕೂ ಹೆಚ್ಚು ವಯಸ್ಸಿನ ಹಿರಿಯ ಮಾತೆಯರಾದ ಗೌರಮ್ಮ, ಚಿಕ್ಕವೀರಮ್ಮ, ಮುನಿರುದ್ರಮ್ಮ, ಬಿ.ಎಸ್. ಪುಟ್ಟಮ್ಮ, ಪಾರ್ವತಮ್ಮ, ಈರಮ್ಮ ಅವರುಗಳನ್ನು ಮಾಜಿ ಸಚಿವೆ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅಭಿನಂದಿಸಿದರು. ಮುಖ್ಯ ಅತಿಥಿಗಳಾಗಿ ಸುಮಂಗಲಿ ಸೇವಾಶ್ರಮದ ಅಧ್ಯಕ್ಷರಾದ ಶ್ರೀಮತಿ ಸುಶೀಲಮ್ಮ ಆಗಮಿಸಿದ್ದರು.



ತೊಂಬತ್ತು ತುಂಬಿದ ಅಭಿನಂದಿತ ತಾಯಂದಿರು

ಸಮಾರಂಭದಲ್ಲಿ ಎಸ್.ಎಸ್.ಎಲ್.ಸಿ. ಮತ್ತು ಪಿ.ಯು.ಸಿ. ಪರೀಕ್ಷೆಯಲ್ಲಿ ಅತಿ ಹೆಚ್ಚು ಅಂಕ ಗಳಿಸಿದ ಕದಳಿ ಮಕ್ಕಳಿಗೆ ಪ್ರತಿಭಾ ಪುರಸ್ಕಾರ ನೀಡಿ ಗೌರವಿಸಲಾಯಿತು. ವಚನಗಾಯನ ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಬಹುಮಾನಗಳನ್ನು ವಿತರಿಸಲಾಯಿತು.

ಕದಳಿ ಮಹಿಳಾ ವೇದಿಕೆಯ ಅಧ್ಯಕ್ಷರಾದ ಶ್ರೀಮತಿ ಪ್ರಮೀಳ ಶಂಕರ್ ಮತ್ತು ಕದಳಿ ವೇದಿಕೆಯ ಎಲ್ಲಾ ಬಳಗಗಳ ಅಧ್ಯಕ್ಷರು ಉಪಸ್ಥಿತರಿದ್ದರು. ಎಳೆಯರ ಲೋಕದ ಮಕ್ಕಳಿಂದ ಮತ್ತು ಕದಳಿ ಬಳಗದ ಸೋದರಿಯರಿಂದ ಸಾಂಸ್ಕೃತಿಕ ಕಾರ್ಯಕ್ರಮ ನಡೆಯಿತು.

–ಚಿತ್ಕಲಾ ರವಿ

"ಮಾನವ ತಾನು ಪ್ರೇಮಿಸಿದ್ದನ್ನು ಸುಂದರಗೊಳಿಸುವಂತೆ, ತಾನು ನಂಬಿದ್ದನ್ನು ಪವಿತ್ರಗೊಳಿಸುತ್ತಾನೆ"

–ಜೋಸೆಫ್ ಅರ್ನೆಸ್ಟ್ ರೆನನ್ (೧೮೨೩)







# ಸಪ್ಪಳವಿಲ್ಲದ ಕೊಪ್ಪಳ ಕಾರ್ಯಕ್ರಮಗಳು

**ಕೊಪ್ಪಳ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಸದ್ದಿಲ್ಲದೆ ನಡೆಸುತ್ತಿರುವ ಚಟುವಟಿಕೆಗಳಿಗೆ ಸಂಬಂಧಿಸಿದ ಕೆಲವು ಚಿತ್ರಗಳು:**



ಶ್ರೀ ವೀರಣ್ಣ ಬಳ್ಳೊಳ್ಳಿ ಅವರ ಮನೆಯಲ್ಲಿ ಮಹಾಮನೆ : ಸಾನ್ನಿಧ್ಯ ಪೂಜ್ಯ ಶ್ರೀ ಶ್ರೀ ಗುರುಸಿದ್ಧೇಶ್ವರ ಮಹಾಸ್ವಾಮಿಗಳು, ಉಪನ್ಯಾಸ : ಮಹಾಲಿಂಗ ಯಾಳಗಿ ಅವರಿಂದ, ವಿಷಯ : 'ಕರ್ನಾಟಕದ ಗಾಂಧಿ ಹರ್ಡೇಕರ ಮಂಜಪ್ಪ'. ಉಪಸ್ಥಿತರು : ಡಾ. ಆರ್.ಎಂ. ಪಾಟೀಲ, ಪ್ರೊ. ಎ.ಬಿ. ಹಿರೇಮಠ, ಎಸ್.ವಿ. ಪಾಟೀಲ



ಗೌರಮ್ಮ ಮಲ್ಲನಗೌಡ ಪಾಟೀಲ ದತ್ತಿ ಉಪನ್ಯಾಸ : ಉಪನ್ಯಾಸಕರು : ಡಾ. ಎಸ್.ಎಂ. ವೃಷಭೇಂದ್ರಸ್ವಾಮಿ; ವಿಷಯ: 'ಡಾ. ಜ.ಚ.ನಿ. ಸಾಹಿತ್ಯ–ಬದುಕು'; ವೇದಿಕೆಯಲ್ಲಿ : ಜಿ.ಜಿ. ದೇಸಾಯಿ, ಡಾ. ಕೆ.ಬಿ. ಬ್ಯಾಳಿ, ಎಂ.ಎಸ್. ಸೌದತ್ತಿ, ಕೆಳಭಾಗ : ಎಂ.ಎಸ್. ಸವದತ್ತಿ ದಂಪತಿಗಳಿಗೆ ಸನ್ಮಾನ




ಡಾ. ಆರ್.ಎಂ. ಪಾಟೀಲರ 'ಮೃತ್ಯುಂಜಯ'ದಲ್ಲಿ 'ಮನೆಯಲ್ಲಿ ಮಹಾಮನೆ' : ಸಾನ್ನಿಧ್ಯ : ಪೂಜ್ಯ ಶ್ರೀ ಗವಿಸಿದ್ಧೇಶ್ವರ ಮಹಾಸ್ವಾಮಿಗಳು, ಉಪನ್ಯಾಸ : ಪ್ರೊ. ಆರ್.ಎಲ್. ಬಡಿಗೇರ, ವಿಷಯ : 'ಲಿಂ. ಮರಿಶಾಂತವೀರ ಮಹಾಸ್ವಾಮಿಗಳು', ವೇದಿಕೆಯಲ್ಲಿ : ಚಂಪಾರಾಜ ಮೆಹತ, ಕದ್ರಳ್ಳಿಮಠ, ಹೆಚ್.ಎಸ್. ಪಾಟೀಲ ಮೊದಲಾದವರು



ಕೇಂದ್ರ ಅಂಚೆ ಮನೆಗಳಲ್ಲಿ 'ಮನೆಯಲ್ಲಿ ಮಹಾಮನೆ' : ಉಪನ್ಯಾಸ : ಡಾ. ವಿನಯಾ ಒಕ್ಕುಂದ; ವೇದಿಕೆಯಲ್ಲಿ : ರಾಮಪುರೆ, ಪ್ರೊ. ಎಂ.ಸಿ. ಒಕ್ಕುಂದ, ಚಂಪಾಲಾಲ ಮೆಹತ, ಡಾ. ಆರ್.ಎಂ. ಪಾಟೀಲ

"ಈ ಜಗತ್ತಿನ ಅನಿಷ್ಟಗಳನ್ನು ಕಾನೂನಿನ ಮೂಲಕ ನಿವಾರಿಸಬಹುದೆಂಬ ನಂಬಿಕೆ ಅತ್ಯಂತ ದೊಡ್ಡ ಭ್ರಮೆಗಳಲ್ಲಿ ಒಂದು"

–ಥಾಮಸ್ ಬಿ. ರೀಡ್ (೧೮೩೯)



## ಬಳ್ಳಾರಿ ಜಿಲ್ಲೆ

### ೪೪ನೆಯ ಮಹಾಮನೆ




ಬಳ್ಳಾರಿ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು :
ಸೊ.ಮ. ಚಂದ್ರಶೇಖರಯ್ಯ ಲೋಲಾಕ್ಷಮ್ಮ ದತ್ತಿ ಉಪನ್ಯಾಸ ;
ಸ್ಥಳ : ಶ್ರೀ ನೀಲಕಂಠೇಶ್ವರ ದೇವಾಲಯ ; ವೇದಿಕೆಯಲ್ಲಿ :
ಉಪನ್ಯಾಸಕರು : ಶ್ರೀಮತಿ ಮಲ್ಲಿನಾಥ
ಅಧ್ಯಕ್ಷತೆ : ಸುಭದ್ರಮ್ಮ ಮನ್ನೂರು
ಅತಿಥಿಗಳು : ಕೆ. ಗಂಗಾಧರಪ್ಪ, ರಂಗನಾಥಶ್ರೇಷ್ಠಿ, ಲೋಲಾಕ್ಷಮ್ಮ
ಸೊ.ಮ.ಚಂ. ಮತ್ತು ಕೆ.ಬಿ. ಸಿದ್ಧಲಿಂಗಪ್ಪ

### ೫೩ನೆಯ ಮಹಾಮನೆ



ಬಳ್ಳಾರಿ ಜಿಲ್ಲಾ ಹೊಸಪೇಟೆ ತಾಲೂಕ ಶರಣ ಸಾಹಿತ್ಯ ಪರಿಷತ್ತಿನ
ಮಹಾಮನೆ ಕಾರ್ಯಕ್ರಮ :
ಉಪನ್ಯಾಸಕರು : ಡಾ. ಆರ್.ಬಿ. ದಿವಾಕರ
ವೇದಿಕೆಯಲ್ಲಿ : ಡಾ. ಎಸ್. ಸೋಮೇಶೇಖರ್
ಡಾ. ಸಿ. ಸೋಮನಾಥ, ಪ್ರೊ. ಸಿ.ಹೆಚ್. ಗುಡಗೂರು
ಮತ್ತು ಹುಡೇದ ಭೀಮಪ್ಪ
–ವರದಿ : ಹೆಚ್.ಎಂ. ಜಂಬುನಾಥ

## ಚಾಮರಾಜನಗರ ಜಿಲ್ಲೆ




### ಪ್ರವಚನ

ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು ಮತ್ತು ಕದಳಿ
ವೇದಿಕೆ ವತಿಯಿಂದ ಚಾಮರಾಜನಗರ ವಿರಕ್ತ
ಮಠದಲ್ಲಿ ಪ್ರವಚನ ನಡೆಸಿದವರು–
ಕಾರಾಪುರ ಮಠದ ಪೂಜ್ಯರು.
ವೇದಿಕೆಯಲ್ಲಿ : ಪೂಜ್ಯಶ್ರೀ ಬಸವರಾಜ
ಸ್ವಾಮಿಗಳು, ಕೆ.ಎಸ್. ನಾಗರಾಜಪ್ಪ, ನಟೇಶ್,
ಬಸಪ್ಪ, ಆರ್. ಪುಟ್ಟಮಲ್ಲಪ್ಪ ಮೊದಲಾದವರು

**ಮಹಾಮನೆಗೆ ಆಜೀವ ಸದಸ್ಯರಾಗಿ 'ಮಹಾಮನೆ'ಯನ್ನು ಉಳಿಸಿ!**







## ಗದಗ ಜಿಲ್ಲೆ



ಗದಗ ಜಿಲ್ಲಾ ತಾಲೂಕ ಕದಳಿ ಮಹಿಳಾ ವೇದಿಕೆಯ
ಸೋದರಿಯರಾದ ಯಲ್ಲಮ್ಮ, ಪ್ರತಿಮಾ, ಅನುರಾಧಾ,
ನಿರ್ಮಲಾ, ಕುಸುಮಾ, ದಾನಕ್ಕ, ಕಾಂಚನಮಾಲಾ, ಚಿನ್ಮಯಿ,
ರೂಪಾ ಕಳ್ಳಿಗುಡ್ಡ ಮೊದಲಾದವರು ಅಕ್ಕಮಹಾದೇವಿಯ
ಜನ್ಮಸ್ಥಳ ಉಡುತಡಿಗೆ ಭೇಟಿ ನೀಡಿದ್ದರು
–ವರದಿ : ಪ್ರೇಮಕ್ಕ ಬಿಂಕದಕಟ್ಟಿ



ಶಿರಹಟ್ಟಿ ತಾಲೂಕ ಲಕ್ಷ್ಮೇಶ್ವರ ಕದಳಿ ಮಹಿಳಾ ವೇದಿಕೆಯ
೪೪ನೆಯ ವಚನೋತ್ಸವ : ಅಧ್ಯಕ್ಷತೆ : ಈರಮ್ಮ ಕೊಟಗಿ; ಅತಿಥಿ:
ಪಾರಕ್ಕ ಅಕಳಂಡಸ್ವಾಮಿ ಮಠ; ಬ್ರಹ್ಮಕುಮಾರಿ ಗೀತಾ ಮತ್ತು
ಬ್ರ.ಕು. ಮಾಲತಿ ಅವರಿಂದ ವಚನ ವಾಚನ ಮತ್ತು ವಿಶ್ಲೇಷಣೆ
–ವರದಿ : ಪ್ರೇಮಕ್ಕ ಬಿಂಕದಕಟ್ಟಿ

## ರಾಯಚೂರು ಜಿಲ್ಲೆ

### ಶಾಲಾ ಕಾಲೇಜುಗಳಿಗೆ ಶರಣ ಸಾಹಿತ್ಯ

ರಾಯಚೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು
ಲಿಂಗಸುಗೂರು ತಾಲೂಕ ಘಟಕ :
ಲಿಂಗಸುಗೂರು ವಿ.ಸಿ.ಬಿ. ಕಾಲೇಜಿನಲ್ಲಿ ಉಪನ್ಯಾಸ
ಕಾರ್ಯಕ್ರಮ :
ವೇದಿಕೆಯಲ್ಲಿ : ಮಹಾಂತೇಶ ಮಸ್ಕಿ,
ಡಾ. ಬಸವಲಿಂಗಯ್ಯ ಸೊಪ್ಪಿಮಠ, ಶರಣಪ್ಪ,
ಡಾ. ಎಸ್.ಬಿ. ಅಮರಖೇಡ ಮೊದಲಾದವರು
ಕೆಳಭಾಗ : ವಿದ್ಯಾರ್ಥಿ ಶ್ರೋತೃಗಳು










## ಪರಿಷತ್ತಿನ ಪ್ರಕಟಣೆಗಳು

| | | ರೂ.ಗಳು |
|---|---|---|
| 1. | ವಚನ ಸಾಹಿತ್ಯ | 50.00 |
| 2. | ವಚನ ವಾಙ್ಮಯ ಮತ್ತು ಭಾಷೆ | 50.00 |
| 3. | ವಚನ ಸಾಹಿತ್ಯ ಮತ್ತು ಮಹಿಳೆ | 50.00 |
| 4. | ಅಕ್ಕಮಹಾದೇವಿ | 50.00 |
| 5. | ಶಿವಯೋಗಿ ಸಿದ್ಧರಾಮ | 50.00** |
| 6. | ಚನ್ನಬಸವಣ್ಣ | 50.00** |
| 7. | ಫ.ಗು. ಹಳಕಟ್ಟಿ | 25.00** |
| 8. | ಶರಣರು ಮತ್ತು ಸಂತರು | 30.00** |
| 9. | ಕದಳಿ ಬನ (ವಚನ ಸಂಗ್ರಹ) | 10.00 |
| 10. | ಅನುಭವ ಮಂಟಪ (ಇಂಗ್ಲಿಷ್, ಹಿಂದಿ, ತೆಲುಗು, ಕನ್ನಡ, ತಮಿಳು) | ತಲಾ 10.00 |
| 11. | Dimensions of Bhakti Movement in india | 200.00 |
| 12. | ವೀರಶೈವ ದೀಪ್ತಿ : ಸಾಹಿತ್ಯ ಚಿಂತನ | 100.00 |
| 13. | ವೀರಶೈವ ದೀಪ್ತಿ : ಗೋಷ್ಠಿಚಿಂತನ | 20.00 |
| 14. | ವೀರಶೈವ ದೀಪ್ತಿ : ತತ್ವಚಿಂತನ | 30.00** |
| 15. | Veerashaiva Deepti | 25.00 |
| 16. | ಶರಣ ಕಿರಣ | 50.00 |
| 17. | ಲದ್ದೆಯ ಸೋಮಣ್ಣ | 15.00 |
| 18. | ಜೇಡರ ದಾಸಿಮಯ್ಯ | 50.00 |
| 19. | ಸ್ವರ ವಚನಗಳು | 60.00 |
| 20. | ಬೆಂಗಳೂರು ನಗರದ ವೀರಶೈವ ಮಠಗಳು | 400.00 |
| 21. | Western Scholars on Basaveshwara | 40.00 |
| 22. | ಶರಣ ತತ್ವಚಿಂತನ-4 (ಚಿಕ್ಕಮಗಳೂರು ಸಮ್ಮೇಳನದ ಪ್ರಬಂಧಗಳ ಸಂಕಲನ) | 75.00 |
| 23. | ಶರಣ ತತ್ವಚಿಂತನ-5 (ಬೆಳಗಾಂ ಸಮ್ಮೇಳನದ ಪ್ರಬಂಧಗಳ ಸಂಕಲನ) | 100.00 |
| 24. | ಶರಣ ತತ್ವಚಿಂತನ-6 (ರಾಯಚೂರು ಸಮ್ಮೇಳನದ ಪ್ರಬಂಧಗಳ ಸಂಕಲನ) | 100.00 |
| 25. | ಶರಣ ತತ್ವಚಿಂತನ-7 (ಬಾಗಲಕೋಟೆ ಸಮ್ಮೇಳನದ ಪ್ರಬಂಧಗಳ ಸಂಕಲನ) | 120.00 |
| 26. | ಜನದನಿ | 60.00 |
| 27. | ಶರಣ ಪ್ರಸಂಗ | 20.00 |
| 28. | ಜಾನಪದ ಸಾಹಿತ್ಯದಲ್ಲಿ ಶರಣರು | 20.00 |
| 29. | ಶೂನ್ಯ ಸಂಪಾದನೆ : ಚಿಂತನೆ-ಮರುಚಿಂತನೆ | 200.00 |
| 30. | ಶರಣ ರೇಖೆ | 30.00 |
| 31. | ಸರ್ವಜ್ಞನ ವಚನಗಳು - ಒಂದು ಜಾನಪದೀಯ ಅಧ್ಯಯನ | 100.00 |
| 32. | ಶರಣುಬನ್ನಿ ಜಲಕಾಯಕಕೆ | 30.00 |
| 33. | ಸುರಿಹೊಂಡ ಭರತಖಂಡ | 30.00 |
| 34. | ಸ್ಮರಣೀಯರು | 200.00 |
| 35. | ಗ್ರಾಮರಾಜ್ಯ | 50.00 |
| 36. | Sharana Vani-Gurubani | 50.00 |
| 37. | ಹರಿಹರನ ರಗಳೆಗಳಲ್ಲಿ ಭಕ್ತಿ | 50.00 |
| 38. | ಶರಣವಾಹಿನಿ (ಸಿ.ಡಿ.) | 250.00 |
| 39. | ಧ್ವನಿಸುರುಳಿಗಳು | |
| | 1. ಜಗದಗಲ ಮುಗಿಲಗಲ | 35.00 |
| | 2. ನೆಲದ ಮರೆಯ ನಿಧಾನ | 35.00 |
| | 3. ಉರಿಯೊಳಗಣ ಕರ್ಪೂರ | 35.00 |
| | 4. ಕದಳಿ | 35.00 |

** ಪ್ರತಿಗಳು ಮುಗಿದಿವೆ.

ಪುಸ್ತಕಗಳು ದೊರೆಯುವ ಸ್ಥಳ :
**ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು**
ಶಿವರಾತ್ರೀಶ್ವರ ವೃತ್ತ, ೧ನೆಯ ಮುಖ್ಯರಸ್ತೆ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦ ೦೭೦

MAHAMANE

Magazine Registration No. RNI 68294/97 -
Postal Registration No. CPMG/KA/BGS - 167/2003-05
Posted at Jayanagar H.P.O. on 5th of every month

November - 2005

# ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು (ರಿ.)

ಮೈಸೂರು

**ಸದಸ್ಯತ್ವ ವಿವರ**

| | | |
|---|---|---|
| ಮಹಾಪೋಷಕರು | - | 5000 ರೂ. |
| ಪೋಷಕರು | - | 3000 ರೂ. |
| ದಾತೃಗಳು | - | 1000 ರೂ. |
| ಆಜೀವ | - | 300 ರೂ. |
| ವಾರ್ಷಿಕ | - | 30 ರೂ. |

**ಸದಸ್ಯ ಸಂಸ್ಥೆಗಳು**

| | | |
|---|---|---|
| ಪೋಷಕ | - | 2000 ರೂ. |
| ಆಜೀವ | - | 1000 ರೂ. |
| ವಾರ್ಷಿಕ | - | 100 ರೂ. |

**ಮಹಾಮನೆ ಜಾಹಿರಾತು ದರ**

| | |
|---|---|
| ರಕ್ಷಾಪುಟ - 4 | ರೂ. 5,000 |
| ರಕ್ಷಾಪುಟ - 2 ಅಥವಾ 3 | ರೂ. 3,000 |
| ಒಳಪುಟ - ವಿಶೇಷ | ರೂ. 2,000 |
| ಒಳಪುಟ ಸಾಧಾರಣ | ರೂ. 1,000 |
| ಅರ್ಧಪುಟ | ರೂ. 600 |

## ಮಹಾಮನೆ ಚಂದಾದಾರರ ಗಮನಕ್ಕೆ

'ಮಹಾಮನೆ'ಗೆ ವಾರ್ಷಿಕ ಸದಸ್ಯರಾದವರು ದಯವಿಟ್ಟು ಸಕಾಲದಲ್ಲಿ ತಮ್ಮ ಸದಸ್ಯತ್ವವನ್ನು ನವೀಕರಿಸಿ ಸಹಕರಿಸಬೇಕಾಗಿ ವಿನಂತಿ. ಸದಸ್ಯತ್ವದ ಅವಧಿ ಮುಗಿದ ಮೇಲೂ 'ಮಹಾಮನೆ' ನಿಮ್ಮ ಮನೆಗೆ ಬರುವುದು ಕಷ್ಟವಾಗುತ್ತದೆ.

ನಿಮ್ಮ ಚಂದಾ ಅವಧಿ ಮುಗಿಯುವ ದಿನಾಂಕವನ್ನು 'ಮಹಾಮನೆ'ಯ ಲಕೋಟೆಯ ಮೇಲಿರುವ ನಿಮ್ಮ ವಿಳಾಸದ ಮೇಲೆ ಕಾಣಿಸಿದೆ. ದಯವಿಟ್ಟು ಗಮನಿಸಿ.

ವರ್ಷಕೊಮ್ಮೆ 120ರೂ. ಕಳುಹಿಸುವುದು ನಿಮ್ಮ ಕಾರ್ಯಭಾರದಲ್ಲಿ ಮರೆತುಹೋಗಿ ಬಿಡಬಹುದು. ಅದಕ್ಕೆ ಬದಲಾಗಿ ಒಮ್ಮೆಗೇ 700 ರೂ. ಕಳುಹಿಸಿ ಆಜೀವ ಸದಸ್ಯತ್ವ ಪಡೆದರೆ ನಮಗೆ ಮತ್ತು ನಿಮಗೆ ಇಬ್ಬರಿಗೂ ಅನುಕೂಲ.

ದಯವಿಟ್ಟು ಸಹಕರಿಸಿ.

- ಪ್ರಕಾಶಕರು.

ಜಾಹಿರಾತುಗಳ ಸಾಹಿತ್ಯದ ಜೊತೆಗೆ ಶುಲ್ಕವನ್ನು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕಾರ್ಯಾಲಯಕ್ಕೆ ಕ್ರಾಸ್ ಮಾಡಿದ ಡಿ.ಡಿ. ಅಥವಾ ಮನಿ ಆರ್ಡರ್ ಮೂಲಕ "ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು (ಮಹಾಮನೆ)" ಈ ಹೆಸರಿನಲ್ಲಿ ಕಳುಹಿಸಬೇಕು.

- ಸಂಪಾದಕರು

**'ಮಹಾಮನೆ' ಚಂದಾ ವಿವರ**

| | |
|---|---|
| ಆಜೀವ ಸದಸ್ಯತ್ವ | 700-00 |
| ವಾರ್ಷಿಕ ಸದಸ್ಯತ್ವ | 120-00 |
| ಬಿಡಿ ಸಂಚಿಕೆ | 15-00 |

Published by : **Akhila Bharatha Sharana Sahithya Parishat (Regd.)**
1st Main, Shivarathrishwara Cricle, 8th Block, Jayanagar, Bangalore - 560 070
Printed by : **Lakshmi Mudranalaya,** 5th Main, Chamarajpet, Bangalore - 560 018
Editors : **M.G. Nagaraj and H.S. Siddagangappa**